# PACKAGE TOURS 2018

**Hotel Room Accom. & South Indian Veg. Food**

## North East India : 14/20 Days
**Apr 22**

Guwahati, Kamakhya, Kaziranga, Shillong, Cherrapunjee, Dawki, Bomdilla, Sela Pass, Tawang, Bhalukpong

## Shaktipeetha Manali Special : 14/18 Days
**Apr 18**

Attari Border [Indo-Pak Border], Amritsar, Vaishnavi Devi, Chamunda, Kangra, Chintapurni, Jwalamukhi, Baijnath, Kullu-Manali, Vasista, Rohtang Pass [Optional], Naina Devi, Kufri, Shimla, Chandigarh, Kurukshetra, New Delhi

## Charodham Yatra : 15/19 Days
**May 21 June 06 Sep 19 Oct 04, 20**

Haridwar, Yamunotri, Gangotri, Uttarkashi, Kedarnath, Triyugi (Optional), Mana, Vyasa Guha, Ganesh Guha, Keshava Prayag, Badrinath, Rishikesh, New Delhi

## Amarnath Yatra : 15/19 Days
**Apr 18**

Attari Border [Indo-Pak Border], Amritsar, Vaishnavi Devi, Srinagar, Gulmarg, Baltal, Amarnath, Kheerbhavani, Kurukshetra, New Delhi

## Rajasthan Special : 12/16 DAYS
**Oct 27**

Jaipur, Pushkar, Ajmer, Chittaurgarh, Udaipur, Eklingji, Mt. Abu, Jodhpur, Bikaner, Jaisalmer

## Nepal : 07 DAYS
**May 24 Sep 06**

Kathmandu, Manokamana, Pokhara, Jomsom, Mukthinath, Bakthapur






# Shri Hansaa Travels

**Recognised by Department of Tourism, Govt. of Karnataka**

: 640, 40th Cross, 8th Block, Jayanagar, Bangalore - 70
: hansaatravels@gmail.com : hansaatravels.com
080-26643276 / 26543891 / 9341215612 / 9341415612



# ವಿವೇಕಪ್ರಭ

ಏಪ್ರಿಲ್-2018 ಸಂಪುಟ 19 ಸಂಚಿಕೆ 04







## ವಿಶೇಷ ಲೇಖನ





## ಧಾರಾವಾಹಿ






ವ್ಯವಸ್ಥಾಪಕ ಸಂಪಾದಕರು: *ಸ್ವಾಮಿ ಆತ್ಮಜ್ಞಾನಂದ* ಸಂಪಾದಕರು: *ಸ್ವಾಮಿ ಜ್ಞಾನಯೋಗಾನಂದ*

ನೆರವು: *ಆರ್. ಎಸ್. ಪೂರ್ಣಾನಂದ, ಡಾ. ಕೆ. ಎಲ್. ಪ್ರಸನ್ನಾಕ್ಷೀ, ಡಾ. ಎಚ್. ಪಾಂಡುರಂಗ ವಿಠಲ*

ಅಕ್ಷರ ಜೋಡಣೆ: *ಶ್ರೀರಾಮಕೃಷ್ಣ ಆಶ್ರಮ, ಮೈಸೂರು* ಮುದ್ರಣ: *ಮಯೂರ್ ಗ್ರಾಫಿಕ್ಸ್, ಬೆಂಗಳೂರು*


**ಮುಖಪುಟ**
'ನಗುವ ಬುದ್ಧ'
ಚೀನಾದ ಹಂಗ್‌ಜೌನಲ್ಲಿರುವ ಬೌದ್ಧ ದೇಗುಲದಲ್ಲಿರುವ ಪ್ರತಿಮೆ


### ಚಂದಾ ವಿವರ

ಬಿಡಿ ಪ್ರತಿ : ₹14 ವಾರ್ಷಿಕ : ₹ 140 ಮೂರು ವರ್ಷ : ₹ 375
ಆಜೀವ (25 ವರ್ಷ) : ₹ 3,000 ಪೋಷಕರು : ₹ 5,000 ಅಥವಾ ಹೆಚ್ಚು.

ವಿದೇಶಗಳಿಗೆ : (ಏರ್‌ಮೇಲ್) ವಾರ್ಷಿಕ : $ 20; ಮೂರು ವರ್ಷ : $ 60
ಆಜೀವ (25ವರ್ಷ) : $ 300 ಪೋಷಕರು : $ 600 ಅಥವಾ ಹೆಚ್ಚು.


### ಈ ಪತ್ರಿಕೆಯ ಧ್ಯೇಯ

'ನಾವು ಪತ್ರಿಕೆಯ ಮೂಲಕ ಸಕಲ ವಿಚಾರ ಗಳಲ್ಲಿಯೂ ಜೀವನಪೋಷಕ ಆದರ್ಶಗಳನ್ನು ಜನರಿಗೆ ಕೊಡಬೇಕು... ವೇದವೇದಾಂತಗಳ ಉಚ್ಚ ಭಾವನೆಗಳನ್ನು ಸುಲಭವಾದ ಮಾತುಗಳಲ್ಲಿ ಜನರಿಗೆ ತಿಳಿಸಿಕೊಡಬೇಕು.'

– ಸ್ವಾಮಿ ವಿವೇಕಾನಂದ


ಚಂದಾ ಹಣವನ್ನು (Sri Ramakrishna Ashrama, Viveka Prabha A/c ಹೆಸರಿಗೆ) ಎಂ.ಒ. ಅಥವಾ ಡಿ.ಡಿ. ಮೂಲಕ ಮಾತ್ರ ಕಳುಹಿಸಬೇಕು. ಚೆಕ್‌ಗಳನ್ನು ಸ್ವೀಕರಿಸಲಾಗುವುದಿಲ್ಲ. ಆಜೀವ ಚಂದಾದಾರರು ಮತ್ತು ಪೋಷಕರಿಗೆ ಮೈಸೂರು ಆಶ್ರಮದ ಪುಸ್ತಕಗಳ ಮೇಲೆ ಮೈಸೂರು ಆಶ್ರಮದ ಮೂಲಕ ನೇರವಾಗಿ ಕೊಂಡಾಗ ಮಾತ್ರ ಶೇ. 20 ರಷ್ಟು ರಿಯಾಯಿತಿ ಕೊಡಲಾಗುವುದು. ಪೋಷಕ ಸಹಾಯಧನಕ್ಕೆ 80-G ಅಧಿನಿಯಮದ ಪ್ರಕಾರ ವರಮಾನ ತೆರಿಗೆ ವಿನಾಯಿತಿ ಇದೆ. ಪೋಷಕರ ಹೆಸರನ್ನು ಪತ್ರಿಕೆಯಲ್ಲಿ ಪ್ರಕಟಿಸಲಾಗುವುದು.


E-mail: mysuru.vivekaprabha@rkmm.org Website: www.vivekaprabha.net ಫೋನ್ : 9481533505

# ಶ್ರೀ ರಾಮಮಾನಸ ಸ್ತೋತ್ರಮ್ – ೨

**ಜಲಧರ - ನಿಭಗಾತ್ರೇ ಸ್ವರ್ಣಯಜ್ಞೋಪವೀತಂ ।**
**ನವಗುಣ-ಗಣಿತಂ ತತ್ ಪಾವನಂ ಪಾವನಾನಾಮ್ ॥**
**ತಡಿದಿವ ಖಲು ಪೀತಂ ವಸ್ತ್ರಮುತ್ತೋತ್ತರೀಯಂ ।**
**ಜಯ ರಘುವರ ದಾಸ್ಯೇ ತ್ವಂ ಗೃಹಾಣ ಸ್ವಮೇವ ॥ ೪ ॥**

ಹೇ ರಘುವರನೆ, ಸ್ವರ್ಣದ ಮೂರು ತಂತುಗಳ ಯಜ್ಞೋಪವೀತ ವನ್ನು ನೀರಿನಿಂದ ಕೂಡಿದ ಮೋಡದಂತಿರುವ ನಿನ್ನ ಶ್ಯಾಮವರ್ಣದ ಕೊರಳಿಗೆ ಹಾಕುತ್ತಿರುವೆನು. ಮಿಂಚಿನಂತೆ ಬಹಳ ಪ್ರಕಾಶಮಾನವಾದ ಹಳದಿಯ ವಸ್ತ್ರವನ್ನು ಉತ್ತರೀಯವಾಗಿ ಅರ್ಪಿಸುತ್ತಿದ್ದೇನೆ. ॥ ೪॥

**ಕಿರೀಟ-ಹಾರಾಂಗದ-ಚಾರು-ಮೇಖಲಾ ।**
**ಮುದ್ರಾದ್ಯನೇಕಾಕೃತಿ-ಭೂಷಣಾನಿ ॥**
**ಮಹೀ-ಸುಗಂಧಂ ಪ್ರಗೃಹಾಣ ಚಾಕ್ಷತಾನ್ ।**
**ಪುಷ್ಪೇಷು ಖಂ ರಾಮ ಮಯಾ ಸಮರ್ಪಿತಮ್ ॥ ೫ ॥**

ಹೇ ಶ್ರೀರಾಮ, ಕಿರೀಟ, ಹಾರ, ಅಂಗದ (ಭುಜದ ಆಭರಣ), ಸುಂದರ ನಡುಪಟ್ಟಿ, ಉಂಗುರ, ಮುಂತಾದ ಅನೇಕ ಆಭರಣ ಗಳು, ಸುಗಂಧ ಮತ್ತು ಅಕ್ಷತೆ, ಆಕಾಶರೂಪಿ ಹೂವುಗಳನ್ನು ಅರ್ಪಿಸುತ್ತಿದ್ದೇನೆ, ಅವುಗಳನ್ನು ಸ್ವೀಕರಿಸು. ॥ ೫ ॥

**ರಾಷ್ಟ್ರೋಪಪ್ಲವನಾಶಕಂ ಸುಲಲಿತಂ ವಾಯುಂ ಸುಧೂಪಂ ತಥಾ ।**
**ರಾಮೇಮಂ ಪರಮಂ ದಿವಾಕರಮಹೋತೇಜೋಮಯಿ ದೀಪಿಕಾಂ ॥**
**ರಾಜೀವಾರುಣಲೋಚನಾಮೃತಮಯಂ ಷಟ್‌ಸ್ವಾದುಲೋಲೈರಸೈಃ ।**
**ಸಂಪನ್ನಂ ವಿನಿವೇದಿತಂ ಸುಮನಸಾ ನೈವೇದ್ಯಮಂಗೀಕುರು ॥ ೬ ॥**

ಹೇ ರಾಮ, ರಾಷ್ಟ್ರಕ್ಕೆ ತಾಪ ಕೊಡುವ ಕೆಟ್ಟ ವಾತಾವರಣವನ್ನು ಹೋಗಲಾಡಿಸುವ ಸುಂದರ ಧೂಪ, ಸೂರ್ಯನಂತಿರುವ ಪರಮ ತೇಜೋಮಯ ದೀಪವನ್ನು ನಿನಗೆ ಅರ್ಪಿಸುತ್ತಿರುವೆನು. ಕಮಲದಂತೆ ಕಣ್ಣುಗಳುಳ್ಳವನೇ, ಭಕ್ತಿಯಿಂದ ಅರ್ಪಿಸುತ್ತಿರುವ ಷಡ್ರಸಯುಕ್ತವಾದ ಪಕ್ವಾನ್ನಗಳ ನೈವೇದ್ಯವನ್ನು ನೀನು ಸ್ವೀಕರಿಸು. ॥ ೬ ॥

**ಮಧ್ಯೇ ಪಾನಮಿದಂ ಸುಶೀತಲಜಲಂ ವಾನೀರಗಂಧಾಭೃತಂ ।**
**ರಾಮ ಸ್ವೀಕುರು ಮತ್ಸಮರ್ಪಿತಮಿದಂ ಹಸ್ತೋದಕಂ ನಿರ್ಮಲಮ್ ॥**
**ತಾಂಬೂಲಂ ಸಫಲಂ ತ್ರಯೋದಶಗುಣಂ ಸ್ವಾತ್ಮೈಕರಾಗಾನ್ವಿತಂ ।**
**ಶ್ರದ್ಧಾರತ್ನ -ಸುವರ್ಣಪುಷ್ಪಸಹಿತಾಂ ಗೃಹ್ಣಾತು ತಾಂ ದಕ್ಷಿಣಾಮ್ ॥ ೭ ॥**

ಶ್ರೀರಾಮನೆ, ಸುಗಂಧಿತ ಬೇರಿನ ಶೀತಲ ಜಲವನ್ನು ಭೋಜನದ ಮಧ್ಯದಲ್ಲಿ ಸ್ವೀಕರಿಸು. ಕೈತೊಳೆಯಲು ಶುದ್ಧವಾದ ನೀರಿದೆ. ಆತ್ಮ ಸ್ವರೂಪಿ ಪ್ರೇಮಯುಕ್ತ ಹದಿಮೂರು ಗುಣಗಳುಳ್ಳ ತಾಂಬೂಲವಿದೆ. ದಕ್ಷಿಣೆ ಗಾಗಿ ಶ್ರದ್ಧಾರೂಪಿ ಸುವರ್ಣ ಪುಷ್ಪಗಳಿವೆ. ಇವೆಲ್ಲವನ್ನೂ ನೀನು ಸ್ವೀಕರಿಸು. ॥ ೭॥

— ಶ್ರೀ ಶಂಕರಾಚಾರ್ಯ



## ಸೂಕ್ತಿಪ್ರಭ

ಎಲೈ ವಿವೇಕಿಯಾದ ಶಿಷ್ಯನೆ, ವೈರಾಗ್ಯವೂ ಜ್ಞಾನವೂ — ಪಕ್ಷಿಗೆ ಹೇಗೋ ಹಾಗೆ — ಮನುಷ್ಯನ ಎರಡು ರೆಕ್ಕೆಗಳೆಂದು ತಿಳಿ. ಇವೆರಡರಲ್ಲಿ ಒಂದಿಲ್ಲದಿದ್ದರೂ ಮುಕ್ತಿಸೌಧದ ಮೇಲಕ್ಕೆ ಹತ್ತು ವುದು ಸಾಧ್ಯವಾಗುವುದಿಲ್ಲ.

— ಶ್ರೀ ಶಂಕರಾಚಾರ್ಯ

ಮಾಡುವಂತಿರಬೇಕು, ಮಾಡದಂತಿರಬೇಕು;
ಮಾಡುವ ಮಾಟದೊಳಗೆ ತಾನಿಲ್ಲದಂತಿರಬೇಕು.
ಕೂಡಲಸಂಗಮದೇವರ ನೆನೆವುತ್ತ ನೆನೆವುತ್ತ
ನೆನೆಯದಂತಿರಬೇಕು.

— ಬಸವಣ್ಣ

ಪ್ರೀತಿಯಿಂದ ಸ್ಫೂರ್ತಿ ಪಡೆದ, ಹಾಗೂ ಅರಿವಿನಿಂದ ಮಾರ್ಗ ದರ್ಶನ ಪಡೆದ ಜೀವನವೇ ಅತ್ಯುತ್ತಮ ಜೀವನ.

— ಬರ್ಟ್ರೆಂಡ್ ರಸೆಲ್

ಎಲ್ಲ ಜೀವಿಗಳ ಮೇಲೆ ದಯೆ — ಇದೇ ನಿಜವಾದ ಧರ್ಮ. ಇತರ ಜೀವಿಗಳ ಬಗ್ಗೆ ನಿನ್ನ ಹೃದಯದಲ್ಲಿ ಅಪರಿಮಿತ ಸದ್ಭಾವ ವನ್ನು ಬೆಳೆಸು.

— ಭಗವಾನ್ ಬುದ್ಧ

ಕತ್ತಲು ಕತ್ತಲನ್ನು ತೊಲಗಿಸಲಾರದು; ಬೆಳಕೊಂದೇ ಆ ಕೆಲಸ ವನ್ನು ಮಾಡುವುದು. ದ್ವೇಷವು ದ್ವೇಷವನ್ನು ತೊಲಗಿಸದು, ಪ್ರೀತಿಯೊಂದೇ ಅದನ್ನು ತೊಲಗಿಸುವುದು.

— ಮಾರ್ಟಿನ್ ಲೂಥರ್ ಕಿಂಗ್ (ಜೂನಿಯರ್)

ಪ್ರೀತಿಯನ್ನು ಮರೆಯಬೇಡ; ಅದು ಹುಚ್ಚನ್ನು ತಂದೊಡ್ಡು ವುದು. ಆ ಹುಚ್ಚಿನಿಂದ ಸಂಸಾರ ಸಾಗರವನ್ನು ದಾಟಿಸುವ ನಿನ್ನ ದೋಣಿಯ ಹಾಯಿ ತೆರೆಯುವುದು.

— ಮೀರಾಬಾಯಿ



# ರಾಮಕೃಷ್ಣ ಮಿಷನ್ ಆಶ್ರಮ

(ರಾಮಕೃಷ್ಣ ಮಿಷನ್, ಬೇಲೂರು ಮಠ, ಹೌರಾ 711 002 ಇದರ ಒಂದು ಶಾಖಾಕೇಂದ್ರ)

**ಮಿಷನ್ ರಸ್ತೆ , ಆಶ್ರಮಪಾರಾ, ಜಲಪಾಯಿಗುರಿ -735101 ಪಶ್ಚಿಮ ಬಂಗಾಳ**

Phone: **8902051967, 9434344492, 03561-228388/228945**, Email: **rkmajal@gmail.com** Website: **www.rkmjalpaiguri.in**

## ಒಂದು ವಿಜ್ಞಾಪನೆ

**''ಯಾರು ಇತರರಿಗಾಗಿ ಬದುಕುವರೋ, ಅವರೇ ನಿಜವಾಗಿ ಬದುಕುವವರು''**

— ಸ್ವಾಮಿ ವಿವೇಕಾನಂದ

ಸ್ನೇಹಿತರೇ ಹಾಗೂ ಭಕ್ತರೇ,

ಸ್ವಾಮಿ ವಿವೇಕಾನಂದರ ಕಹಳೆ ಧ್ವನಿಗೆ ಓಗೊಟ್ಟು 1928ರಲ್ಲಿ **ಜಲಪಾಯಿಗುರಿ** ಪಟ್ಟಣದಲ್ಲಿ ಕೆಲವು ಭಕ್ತರು ಒಂದು ಆಶ್ರಮವನ್ನು ಆರಂಭಿಸಿದರು. 1941ರಲ್ಲಿ ಅದು ಬೇಲೂರು ಮಠದ ರಾಮಕೃಷ್ಣ ಮಿಷನ್‌ನ ಶಾಖಾಕೇಂದ್ರವಾಗಿ ಸೇರ್ಪಡೆಗೊಂಡಿತು. ಹಿಮಾಲಯ ಪರ್ವತ ಶ್ರೇಣಿಯ ಕೆಳಗಿನ ಹಂತದ ತಪ್ಪಲು ಪ್ರದೇಶದಲ್ಲಿ ನೆಲೆಸಿರುವ ಈ ಆಶ್ರಮವು **ನಾಲ್ಕು ರಾಷ್ಟ್ರಗಳ ನಡುವಿನ ವಿಶಿಷ್ಟ ಭೂಪ್ರದೇಶದಲ್ಲಿ** ನೆಲೆಸಿದೆ. ಹಚ್ಚಹಸಿರಿನ ರಮಣೀಯ ನೈಸರ್ಗಿಕ ಸಮೃದ್ಧಿಯಿಂದ ಕೂಡಿದ ಈ ಆಶ್ರಮವು ಸಮೀಪದ ಹಾಗೂ ದೂರದ ಅನೇಕ ಮಂದಿ ಸಾಧಕರನ್ನು ತನ್ನೆಡೆಗೆ ಆಕರ್ಷಿಸುತ್ತಿದೆ. ಸೇವಾ ಕಾರ್ಯಗಳಲ್ಲಿ ವಿದ್ಯಾರ್ಥಿ ಮಂದಿರ, ಮೌಲ್ಯ ಶಿಕ್ಷಕ ತರಬೇತಿ, ಏಕೀಕೃತ ಶಿಶು ಅಭಿವೃದ್ಧಿ ಯೋಜನೆ, ಉಚಿತ ಚಿಕಿತ್ಸಾಲಯ, ಗ್ರಂಥಾಲಯ ಹಾಗೂ ವಾಚನಾಲಯ, ಪರಿಹಾರ ಮತ್ತು ಅಭಿವೃದ್ಧಿ ಕಾರ್ಯಗಳು ಹಾಗೂ ಇನ್ನಿತರ ಯೋಜನೆಗಳು ಪ್ರಮುಖವಾಗಿವೆ.



ಸ್ವಾಮಿ ವಿವೇಕಾನಂದರು 1893ರ ಸೆಪ್ಟೆಂಬರ್ 11ರಂದು ಚಿಕಾಗೋದಲ್ಲಿ ನೀಡಿದ ನಿತ್ಯ ಸ್ಮರಣಾರ್ಹವೂ ಅತ್ಯಮೋಘವೂ ಆದ ಉಪನ್ಯಾಸಗಳು ನಡೆದ 'ಆರ್ಟ್ ಇನ್‌ಸ್ಟಿಟ್ಯೂಟ್'ಅನ್ನು ಹೋಲುವ '**ವಿವೇಕಾನಂದ ಸಭಾಗೃಹ**'ದ ನಿರ್ಮಾಣ ಮಾಡುವ ಯೋಜನೆಯನ್ನು ನಾವು ಹಾಕಿಕೊಂಡಿದ್ದೇವೆ. (ಅದರ ಮಾದರಿಯು ಚಿತ್ರದಲ್ಲಿದೆ.) ಈ ಬಹೂಪಯೋಗಿ ಕಟ್ಟಡವು 16,000 ಚದರಡಿ ಅಳತೆಯಷ್ಟು ವಿಶಾಲವಾಗಿದ್ದು, ಸುಮಾರು 1300 ಮಂದಿ ಕುಳಿತುಕೊಳ್ಳಬಹುದಾಗಿದೆ. ವಿದ್ಯಾರ್ಥಿಗಳಿಗೆ, ಯುವಕರಿಗೆ ಹಾಗೂ ಸಾರ್ವಜನಿಕರಿಗೆ ವಿಚಾರ ಸಂಕಿರಣ, ಸಭೆ-ಸಮಾರಂಭಗಳನ್ನು ಏರ್ಪಡಿಸಲು, ಮೌಲ್ಯಶಿಕ್ಷಣ ಸಾಂಸ್ಕೃತಿಕ ಆಧ್ಯಾತ್ಮಿಕ ಹಾಗೂ ಸೇವಾ ಕಾರ್ಯಗಳನ್ನು ನಡೆಸಲು ಮತ್ತು ವಿವಿಧ ಹಬ್ಬ-ಹರಿದಿನಗಳನ್ನು ಹಮ್ಮಿಕೊಳ್ಳಲು ಈ ಕಟ್ಟಡ ನೆರವಾಗಲಿದೆ. ವಿಸ್ತಾರ ಉತ್ತರ ಬಂಗಾಳದ ಹಲವು ಪ್ರದೇಶಗಳಿಂದ ಬರುವ ಅಪಾರ ಸಂಖ್ಯೆಯ ಭಕ್ತರುಗಳು ಈ ಕಾರ್ಯಕ್ರಮಗಳಲ್ಲಿ ಭಾಗವಹಿಸಲು ಇದರಿಂದ ಸಾಧ್ಯವಾಗುತ್ತದೆ. ಈ ಮೂಲಕ ಸ್ವಾಮಿ ವಿವೇಕಾನಂದರ '**ಮಾನವ - ನಿರ್ಮಾಣ**' ಹಾಗೂ '**ರಾಷ್ಟ್ರ ನಿರ್ಮಾಣ**'ದ ಕನಸನ್ನು ಸಾಕಾರಗೊಳಿಸಲು ಸಾಧ್ಯವಾಗುವುದು ಎಂದು ನಮ್ಮ ನಂಬಿಕೆ. ಇದರ ನಿರ್ಮಾಣಕಾರ್ಯಕ್ಕೆ ಸುಮಾರು 4.66 ಕೋಟಿ ರೂ. ಅಂದಾಜು ವೆಚ್ಚ ತಗಲುವುದು. ಇದಕ್ಕೆ ತಾವು ಉದಾರ ಧನಸಹಾಯ ನೀಡಬೇಕೆಂದು ತಮ್ಮಲ್ಲಿ ನಾವು ವಿನಂತಿಸಿಕೊಳ್ಳುತ್ತಿದ್ದೇವೆ.

ದಾನಿಗಳಲ್ಲಿ ತಮ್ಮ ಪ್ರೀತಿಪಾತ್ರರಾದವರ ಸ್ಮರಣೆಗಾಗಿ ದತ್ತಿ ನೀಡಬಯಸುವವರಿದ್ದರೆ, ಅವರ ಬಯಕೆಯನ್ನು ಈಡೇರಿಸಲು, ಅವರ ಪ್ರೀತಿ ಪಾತ್ರರಾದವರ ಹೆಸರನ್ನು ಸೂಕ್ತ ಸ್ಥಳದಲ್ಲಿ ಫಲಕಗಳ ಮೂಲಕ ಹಾಕಿಸಲಾಗುವುದು. ಆಸಕ್ತ ದಾನಿಗಳು ಈ ಕುರಿತು ಆಶ್ರಮದ ಕಾರ್ಯದರ್ಶಿಯವರನ್ನು ಸಂಪರ್ಕಿಸಬಹುದು. ಅವರ ವಿಳಾಸ: **The Secretary, Ramakrishna Mission Ashrama, Ashramapara, Mission Road, Jalapaiguri - 735101, West Bengal, India.**

ದೇಣಿಗೆಗಳನ್ನು A/C Payee ಚೆಕ್, ಡ್ರಾಫ್ಟ್, ಮನಿ ಆರ್ಡರ್ ಮೂಲಕ ಕಳುಹಿಸಬಹುದು. ಅವುಗಳನ್ನು ಕೃತಜ್ಞತಾಪೂರ್ವಕ ಸ್ವೀಕರಿಸಿ, ಸ್ವೀಕೃತಿ ಪತ್ರವನ್ನು ಕಳುಹಿಸುತ್ತೇವೆ. ಚೆಕ್, ಡ್ರಾಫ್ಟ್‌ಗಳನ್ನು ಕಳುಹಿಸಬೇಕಾದ ವಿಳಾಸ: **Ramakrishna Mission Ashrama, Jalapaiguri.**

**ಈ ಧನಸಹಾಯಗಳಿಗೆ 1961ರ ಆದಾಯ ತೆರಿಗೆ ಕಾಯಿದೆಯನ್ವಯ u/s 80-G ತೆರಿಗೆ ವಿನಾಯಿತಿ ಅನ್ವಯವಾಗುತ್ತದೆ.**

| Payment may be made by Bank Transfer (within INDIA) | Payment may be made by Bank Transfer (in respect of Foreign Countries) |
|---|---|
| Bank Details: | Bank Details: |
| State Bank of India, Jalpaiguri Branch, Club Road, Jalpaiguri: 735101 | State Bank of India, **Jalpaiguri Branch, Club Road,** Jalpaiguri: 735101 |
| Savings Bank A/C no. **11188188101**; IFSC Code: **SBINOOOOO95** | savings Bank A/C no. **11188171550**; IFSC Code: **SBINOOOOO95** |
| MICR No: **735002095** Branch Code: **SBI Jalpaiguri** | MICR No: **735002095** Branch Code: **SBI Jalpaiguri** |

**ಆನ್‌ಲೈನ್ ಮೂಲಕ ಹಣಪಾವತಿ:** ಆನ್‌ಲೈನ್ ಮೂಲಕ ಹಣವನ್ನು ವರ್ಗಾಯಿಸಿದ ತಕ್ಷಣವೇ rkmajal@gmail.com ಈ ವಿಳಾಸಕ್ಕೆ ತಮ್ಮ ಹೆಸರು, ಪೂರ್ಣ ಅಂಚೆ ವಿಳಾಸ, PAN No. ಹಾಗೂ ವರ್ಗಾಯಿಸಿದ ಮೊತ್ತ - ಈ ವಿವರಗಳನ್ನು ನಮಗೆ ತಿಳಿಸಲು ಕೋರುತ್ತೇವೆ.

ಈ ಉದಾತ್ತ ಯೋಜನೆಗಾಗಿ ನೀವು ಮಾಡುವ ಧನಸಹಾಯವು ದೂರಗಾಮಿಯೂ, ನಿರ್ಮಾಣಕಾರ್ಯ ಪೂರ್ಣಗೊಳ್ಳುವ ತನಕ ಸಹಕಾರಿಯೂ ಆಗಿರುವುದರಲ್ಲಿ ಯಾವುದೇ ಸಂದೇಹವಿಲ್ಲ.

ಶ್ರೀರಾಮಕೃಷ್ಣರು ನಿಮ್ಮ ಮೇಲೆ ಸದಾ ಕೃಪೆದೋರಿ ಹರಸಲಿ ಎಂಬುದೇ ನಮ್ಮ ಹೃತ್ಪೂರ್ವಕ ಪ್ರಾರ್ಥನೆ.

ಜಲಪಾಯಿಗುರಿ
ಡಿಸೆಂಬರ್ ೯, ೨೦೧೭

ಇತಿ ಭಗವತ್ಸೇವೆಯಲ್ಲಿ ತಮ್ಮ
**ಸ್ವಾಮಿ ಶಿವಪ್ರೇಮಾನಂದ**
ಕಾರ್ಯದರ್ಶಿಗಳು



ಆದ್ಯಾಶಕ್ತಿಯ ಪೂಜೆಯನ್ನು ಮಾಡಬೇಕು; ಆಕೆಯನ್ನು ಪ್ರಸನ್ನಳನ್ನಾಗಿ ಮಾಡಬೇಕು. ಆಕೆಯೇ ಹೆಂಗಸರ ರೂಪವನ್ನು ಧರಿಸಿಕೊಂಡು ಇದ್ದಾಳೆ. ಅದಕ್ಕಾಗಿಯೇ ನನ್ನದು ಮಾತೃಭಾವ. ಈ ಭಾವ ಬಹಳ ಶುದ್ಧವಾದ ಭಾವ.

— ಶ್ರೀರಾಮಕೃಷ್ಣರು



ಮನಸ್ಸು ಶುದ್ಧವಾದರೆ ಧ್ಯಾನ, ಧಾರಣ ಏಕೆ ಸಾಧ್ಯವಾಗದು? ದರ್ಶನ ವೇಕಾಗದು? ಜಪ ಮಾಡಲು ಕುಳಿತರೆ ಒಳಗಿನಿಂದ ತಾನಾಗಿಯೇ ಭಗವಂತನ ನಾಮ ಮೇಲಕ್ಕೆ ಎದ್ದುಬರತೊಡಗುವುದು. ಅದಕ್ಕಾಗಿ ವಿಶೇಷ ಪ್ರಯತ್ನ ಮಾಡಬೇಕಾಗಿರುವುದಿಲ್ಲ.

— ಶ್ರೀಮಾತೆ ಶಾರದಾದೇವಿ



ನೀವು ಯಾರಿಗೂ ಸಹಾಯ ಮಾಡಲಾರಿರಿ. ಬೇಕಾದರೆ ನೀವು ಸೇವೆ ಮಾಡಬಹುದು ಅಷ್ಟೆ. ನೀವು ಭಗವಂತನ ಮಕ್ಕಳನ್ನು ಪೂಜಿಸಬಹುದು; ನಿಮಗೆ ಆ ಸುಯೋಗ ದೊರಕಿದರೆ ಆತನನ್ನೇ ಪೂಜಿಸಬಹುದು.

— ಸ್ವಾಮಿ ವಿವೇಕಾನಂದ

# ವಿವೇಕಪ್ರಭ

**ರಾಮಕೃಷ್ಣ ಮಹಾಸಂಘದ ಕನ್ನಡ ಮಾಸಪತ್ರಿಕೆ**

ಶ್ರೀರಾಮಕೃಷ್ಣ ಆಶ್ರಮ, ವಿವೇಕಪ್ರಭ ಕಾರ್ಯಾಲಯ, ಯಾದವಗಿರಿ, ಮೈಸೂರು 570 020



## ಚಂದಾ ಅರ್ಜಿ

ಮಾನ್ಯರೇ, (ನಿಮಗೆ ಸಂಬಂಧಿಸಿದ್ದನ್ನು ✓ ಮಾಡಿ)

☐ ನನ್ನನ್ನು / ಈ ಕೆಳಕಂಡ ಹೆಸರಿನವರನ್ನು 'ವಿವೇಕಪ್ರಭ' ಪತ್ರಿಕೆಯ ಚಂದಾದಾರರನ್ನಾಗಿ/ ಪೋಷಕರನ್ನಾಗಿ ಮಾಡಬೇಕಾಗಿ ವಿನಂತಿ.

☐ ನನ್ನ/ ಕೆಳಕಂಡ ಹೆಸರಿನವರ ಚಂದಾವನ್ನು ನವೀಕರಿಸಬೇಕಾಗಿ ವಿನಂತಿ. ಈಗಿನ ಚಂದಾಸಂಖ್ಯೆ........................

**ನನ್ನ ವಿಳಾಸ**

ನನ್ನ ಹೆಸರು..........................................................................

ವಿಳಾಸ...................................................................................

.............................................................................................

...................................................ಪಿನ್.............................

ಫೋನ್ ನಂ: ...........................................................................

**ಪತ್ರಿಕೆ ಪಡೆಯುವವರ ವಿಳಾಸ**

ಹೆಸರು.....................................................................................

ವಿಳಾಸ...................................................................................

.............................................................................................

...................................................ಪಿನ್.............................

ಫೋನ್ ನಂ: ...........................................................................

ಚಂದಾ ವಿವರ: (ನಿಮಗೆ ಸಂಬಂಧಿಸಿದ್ದನ್ನು ✓ ಮಾಡಿ)

| 1 ವರ್ಷದ ಚಂದಾ | 3 ವರ್ಷದ ಚಂದಾ | ಆಜೀವ ಚಂದಾ | ಪೋಷಕರ ಸಹಾಯಧನ |
|---|---|---|---|
| ₹ 140 | ₹ 375 | ₹ 3000 | ₹ 5000 |

ಹಣವನ್ನು ಮನಿ ಆರ್ಡರ್/ಚೆಕ್/ ಡಿ.ಡಿ./ ನೆಫ್ಟ್ (ಶ್ರೀರಾಮಕೃಷ್ಣ ಆಶ್ರಮ, ವಿವೇಕಪ್ರಭ A/c ಹೆಸರಿನಲ್ಲಿ) ಮೂಲಕ ಕಳುಹಿಸುತ್ತಿದ್ದೇನೆ.

ವಿವರ......................................................................

1. ಆನ್‌ಲೈನ್ ಮೂಲಕ ಚಂದಾದಾರರಾಗಲು http://www.srkmys.org/activities/viveka-prabha/ ಈ ಲಿಂಕನ್ನು ಬಳಸಿ.
2. ವಿದೇಶಗಳಿಗೆ ಅನ್ವಯವಾಗುವ ಚಂದಾ ವಿವರಗಳಿಗೆ ಹಾಗೂ ಇತರ ವಿವರಗಳಿಗಾಗಿ ನಮಗೆ ಬರೆಯಿರಿ.

ಸಹಿ

ನೇರವಾಗಿ ನೆಟ್ ಬ್ಯಾಂಕಿಂಗ್ ಮೂಲಕ ಹಣ ಪಾವತಿಸಿ ಚಂದಾದಾರರಾಗಬಹುದು. ಅದಕ್ಕೆ ಅಗತ್ಯವಾದ ಮಾಹಿತಿ:
**Vivekaprabha Department, Corporation Bank, Vontikoppal Branch, V.V.Mohalla, Mysore 570 002.**
**SB A/c No: 520101237240455, IFSC Code: CORP0000274.** *ಹಣ ವರ್ಗಾವಣೆ ಮಾಡಿದ ಬಳಿಕ ಇ-ಮೇಲ್ ಮೂಲಕ* ***(mysuru.vivekaprabha@rkmm.org)*** *ನಿಮ್ಮ ಹೆಸರು, ವಿಳಾಸ, ಪಿನ್‌ಕೋಡ್, ಫೋನ್ ನಂ., ಎಷ್ಟು ವರ್ಷದ ಚಂದಾ ಇತ್ಯಾದಿ ವಿವರಗಳನ್ನು ತಿಳಿಸುವುದು ಅತ್ಯಗತ್ಯ.*

# ಹೊಸ ಬದುಕಿಗೆ ಬೆಳಕು

ಎಲ್ಲರ ಬದುಕೂ ಏರುಪೇರುಗಳಿಂದ ಕೂಡಿರುತ್ತವೆ. ಪ್ರಯತ್ನಗಳು ಎಷ್ಟಿದ್ದರೂ ಸರಿ, ಹಲವು ಬಾರಿ ಸೋತು ಸುಣ್ಣವಾಗುತ್ತೇವೆ. ಗೆಲುವುಗಳು ಕೆಲವೊಮ್ಮೆ ಪ್ರಚಂಡ ಉತ್ಸಾಹ ನೀಡುತ್ತವೆ, ಆದರೆ ಮತ್ತೊಂದು ಸಲ ಮುಗ್ಗರಿಸಿ ಬಿದ್ದು ಏಟು ತಿನ್ನುತ್ತೇವೆ. ಇಂಥ ಏರಿಳಿತಗಳಿಂದ ಸಾಗುವ ಬದುಕಿನಲ್ಲಿ ಒಂದು ಸಲವೂ 'ಬದುಕೆಂದರೆ ಹೀಗೆ' ಎಂದು ನಮಗನ್ನಿಸುವುದಿಲ್ಲ. 'ನಾನೇಕೆ ಯಾವಾಗಲೂ ಸೋಲುತ್ತೇನೆ, ನನಗೆ ಮಾತ್ರ ಯಾವಾಗಲೂ ಕಷ್ಟ ಬಂದೊದಗುತ್ತದೆ?' ಎಂದೇ ನಾವು ಹತಾಶೆಗೊಳಗಾಗುತ್ತೇವೆ. ನಾವು ಗೆದ್ದ ಸಂದರ್ಭ, ಹುಮ್ಮಸ್ಸಿನ ಕ್ಷಣಗಳನ್ನು ಎಲ್ಲ ಅಡ್ಡಿ–ಆತಂಕ, ತೊಂದರೆಗಳು ತಿಂದುಹಾಕುತ್ತವೆ. ಆದ್ದರಿಂದ ಸುಲಭವಾಗಿ ನಾವು, 'ಯಾಕೋ ಜೀವನದಲ್ಲಿ ಸಾರವೇ ಇಲ್ಲ' ಎಂದು ತೀರ್ಮಾನಿಸಿಬಿಡುತ್ತೇವೆ. ದಿನ ಬೆಳಗಾದರೆ ಚಿಂತೆ, ಖಿನ್ನತೆ, ಬೇಜಾರು. ಇತರರ ಬಳಿ ಹೇಳಿ ಹಗುರವಾಗಿಸಿಕೊಳ್ಳುವುದಕ್ಕೂ ಚೈತನ್ಯವಿಲ್ಲ. ನಡುವಯಸ್ಸು, ವೃದ್ಧಾಪ್ಯ ಬಂದರಂತೂ 'ವೃದ್ಧಸ್ತಾವತ್ ಚಿಂತಾಮಗ್ನಃ' ಎಂಬುದನ್ನು ನಾವಾಗಿಯೇ ಒಪ್ಪಿಕೊಳ್ಳುತ್ತೇವೆ. ಆತಂಕಕಾರಿ ವಿಷಯವೆಂದರೆ, ಆಧುನಿಕರೆನಿಸಿಕೊಳ್ಳುವ ಯುವಕರಲ್ಲಿ, ವೃತ್ತಿನಿರತ ತರುಣರಲ್ಲಿ ಹಾಗೂ ಹದಿಹರೆಯದ ವಿದ್ಯಾರ್ಥಿಗಳಲ್ಲಿ ಚಿಂತೆ, ಖಿನ್ನತೆ, ಭ್ರಮನಿರಸನ ಇವು ಬಗೆಹರಿಯದ ಸಮಸ್ಯೆಗಳಾಗಿ ಕಾಣಿಸಿಕೊಳ್ಳುತ್ತಿದೆ. ಆಧುನಿಕ ಶೈಲಿಯ ಜೀವನ ನಡೆಸುವ ನಗರಗಳಲ್ಲಿಯೇ ಈ ಸಮಸ್ಯೆ ಹೆಚ್ಚುತ್ತಿರುವುದು ನಿಜ. ಇಂಥವರಿಗೆಲ್ಲ ಹಲವು ಬಾರಿ ಕಾಡುವ ಪ್ರಶ್ನೆಯಿದು: ನಮಗೂ ಹೊಸ ಬದುಕು ಸಾಧ್ಯವಿಲ್ಲವೆ?

### ಹೊಸ ಬದುಕಿನ ಬಯಕೆ

ಕೇವಲ ಹತಾಶೆಗೊಳಗಾದವರಿಗೆ ಮಾತ್ರವಲ್ಲ; ಯಶಸ್ಸಿಗಾಗಿ, ಜೀವನದಲ್ಲಿ ಒಂದು ನೆಲೆಗಾಗಿ ಹೋರಾಟ ನಡೆಸುತ್ತಿರುವವರಿಗೆಲ್ಲ ಹೊಸ ಬದುಕಿನ ಬಯಕೆ ಆಗಾಗ ಮೂಡುತ್ತದೆ. ತನ್ನಿಂದ ಏನು ಮಾಡುವುದೂ ಅಸಾಧ್ಯ ಎಂದು ಯಾರಿಗಾದರೂ ನೂರಕ್ಕೆ ನೂರು ಖಾತ್ರಿಯಾದರೆ, ಅವನಿಗೆ ಬದುಕಿನಲ್ಲಿ ಉಳಿದಿರುವುದಾದರೂ ಏನು? ಮುಳುಗುವವನಿಗೆ ಹುಲ್ಲುಕಡ್ಡಿಯ ಆಸರೆ ಎಂಬಂತೆ, ಎಲ್ಲೋ ಏನೋ ಒಂದು ಬಗೆಯ ದಾರಿ ಕಾಣಿಸಬಹುದು, ಯಾವ ರೀತಿಯಲ್ಲಾದರೂ ಸಹಾಯ ಒದಗಿ ಬರಬಹುದು, ದೀರ್ಘಕತ್ತಲೆಯ ಮೂಲೆಯಲ್ಲಿ ಎಲ್ಲೋ ಒಂದೆಡೆ ಬೆಳಕಿನ ರೇಖೆ ಕಾಣಿಸಿಕೊಳ್ಳಬಹುದು ಎಂಬ ಕ್ಷೀಣವಾದ ನಿರೀಕ್ಷೆ ಹಲವರದು. ಜೀವನವನ್ನು ಮುಂದಕ್ಕೆ ತಳ್ಳುವ ಶಕ್ತಿ ಇಂಥ ನಿರೀಕ್ಷೆಗಳಿಂದ, ದೂರದ ಆಸೆಗಳಿಂದ ಮಾತ್ರ.

ಈ ರೀತಿಯ ನಿರೀಕ್ಷೆಗೂ ಕಾರಣಗಳಿರುತ್ತವೆ. ಯಾರೋ ಒಬ್ಬ ವ್ಯಕ್ತಿಗೆ ಅಗೋಚರವಾದ ಕಡೆಯಿಂದ, ಅನಿರೀಕ್ಷಿತವಾಗಿ ಬದಲಾವಣೆಯ ಗಾಳಿ ಬೀಸಿರುತ್ತದೆ, ಅವನ ಬದುಕೆಲ್ಲವೂ ಬದಲಾಗಿರುತ್ತದೆ. ಕ್ರಮೇಣ ಅವನು ಹಳೆಯ ತೊಂದರೆಗಳನ್ನೆಲ್ಲ ನಿವಾರಿಸಿಕೊಂಡು, ಮೈಕೊಡವಿ ನಿಲ್ಲುತ್ತಾನೆ. ಇಂಥ ಉದಾಹರಣೆಗಳೇ ಅವರ ಪಾಲಿಗೆ ಆಶಾಭಾವವನ್ನು ಮೂಡಿಸುತ್ತವೆ.

ಪ್ರಪಂಚದಲ್ಲಿ ವಸ್ತು, ವ್ಯಕ್ತಿ, ಸನ್ನಿವೇಶಗಳು ಪ್ರತಿಕ್ಷಣವೂ ಬದಲಾಗುತ್ತಿರುತ್ತವೆ. ಈ ಕಾರಣದಿಂದ ಇಲ್ಲಿನ ಆಗುಹೋಗುಗಳಿಗೆ ಅನಂತ ಸಾಧ್ಯತೆಗಳಿರುತ್ತವೆ. ಹಿಂದಿನ ಅನುಭವಗಳಿಂದ ಹಾಗೂ ನಮ್ಮ ಸುತ್ತಮುತ್ತ ನಡೆಯುತ್ತಿರುವ ವಿದ್ಯಮಾನಗಳ ಅವಲೋಕನದಿಂದ ನಾವು ಎಲ್ಲ ಸಾಧ್ಯತೆಗಳ ಊಹೆ ಮಾಡಿಕೊಳ್ಳುತ್ತೇವೆ. ಅದಕ್ಕನುಗುಣವಾಗಿ ನಮ್ಮ ಪ್ರಯತ್ನ, ಶ್ರಮ, ಯೋಜನೆ ಫಲಕಾರಿಯಾಗುತ್ತವೆ. ಒಂದೆರಡು ಪ್ರಯತ್ನಗಳಲ್ಲಿ ಸೋಲು ಕಂಡವರು ಅಷ್ಟಕ್ಕೇ ಹತಾಶೆಗೊಳಗಾದರೆ, ಇನ್ನಿತರ ಸಾಧ್ಯತೆಗಳೇನು ಎಂದು ಕಂಡುಕೊಳ್ಳುವ, ಫಲಕಾರಿಯಾದ ವಿಧಾನಗಳನ್ನು ಅರಿತುಕೊಳ್ಳುವ ಬಗೆ ಹೇಗೆ? ಕಲಿಕೆಯೇ ಜೀವನದ, ಜೀವಂತಿಕೆಯ ಲಕ್ಷಣ. ಪ್ರತಿದಿನವೂ, ಪ್ರತಿ ಕ್ಷಣವೂ ಜಗತ್ತು ನಮಗೆ ಒಂದಲ್ಲ ಒಂದನ್ನು ಕಲಿಸುತ್ತದೆ. ಅದನ್ನು ಅರ್ಥಮಾಡಿಕೊಂಡು ಯಶಸ್ಸನ್ನು ಅರಸುತ್ತ ಹೋಗುವುದೇ ಜೀವನವಲ್ಲವೆ?

### ಹೊಸ ಶಕ್ತಿ ಎಲ್ಲಿಂದ ಬರುವುದು?

ವೈಫಲ್ಯ, ಹತಾಶೆಗಳಿಂದ ಸೋತುಹೋದವರಿಗೆ ಬಹಳ ದೊಡ್ಡ ತಡೆಯೆಂದರೆ ಇದು: ಎದ್ದು ನಿಲ್ಲುವುದಕ್ಕೆ ಚೈತನ್ಯ ಎಲ್ಲಿಂದ ಬರಬೇಕು? ಸೋಲಿನ ಮೇಲೆ ಸೋಲು, ಸಾಲದ ಮೇಲೆ ಸಾಲದ ಹೊರೆ. ನಾಲ್ಕು ಕಡೆಯಿಂದ ಹಿಂಸಿಸುತ್ತಿರುವ ಚಿಂತೆಗಳು. ಇಂಥ ಪರಿಸ್ಥಿತಿಯಲ್ಲಿ ಯಾವ ಸಹಾಯವೂ ಸಿಗುತ್ತಿಲ್ಲ; ಮೇಲಕ್ಕೆ ಎತ್ತಿ ನಿಲ್ಲಿಸುವ ಯಾವ ವ್ಯಕ್ತಿಯೂ ಕಾಣಿಸುತ್ತಿಲ್ಲ. ಇದಕ್ಕೇನು ಪರಿಹಾರ?

ಈ ಪರಿಸ್ಥಿತಿಯಲ್ಲಿ ಮರೆತುಹೋಗುವ ಒಂದು ಅತ್ಯಂತ ಮುಖ್ಯವಾದ ವಿಚಾರವೆಂದರೆ, ಅಂಥ ಶಕ್ತಿ, ಚೈತನ್ಯ, ಸಹಾಯಗಳು ಬೇರೆ ಎಲ್ಲಿಂದಲೋ ಬರುವುದಿಲ್ಲ ; ಅವು ನಮ್ಮೊಳಗೆಯೇ ಮನೆ ಮಾಡಿವೆ. ನಮಗೆ ಅದರ ಅರಿವಿಲ್ಲದೆ, ಅಸಹಾಯಕರಾಗಿ ದಿಕ್ಕು ತೋಚದೆ ನರಳುತ್ತಿದ್ದೇವೆ, ಅಷ್ಟೆ. ಸ್ವಾಮಿ ವಿವೇಕಾನಂದರ ಸ್ಫೂರ್ತಿಯ ನುಡಿಗಳನ್ನು ನೆನೆಪಿಸಿಕೊಳ್ಳಬೇಕು: ''ನಿಮ್ಮಲ್ಲಿ ನೀವು ಶ್ರದ್ಧೆ ಇಡಿ. ನಿಮಗೆ ಲೌಕಿಕ ಸಂಪತ್ತು ಬೇಕಾದರೆ ಸಾಹಸದಿಂದ ಕೆಲಸ ಮಾಡಿ. ಲಭಿಸಿಯೇ ಲಭಿಸುತ್ತದೆ. ಮನಸ್ಸನ್ನು ಉದಾತ್ತ ಭಾವನೆಗಳಿಂದ ಮತ್ತು ಧೈರ್ಯದಿಂದ ತುಂಬಿ, ಅವನ್ನೇ ಹಗಲು ರಾತ್ರಿ ನಿಮ್ಮ ಮನಸ್ಸಿನಲ್ಲಿ ಚಿಂತಿಸಿ. ಅವುಗಳಿಂದ ಪ್ರಚಂಡ ಕರ್ಮ ಸಾಧ್ಯವಾಗಬಹುದು... ಇಲ್ಲ, ಸಾಧ್ಯವಿಲ್ಲ ಎಂದು ಎಂದಿಗೂ ಹೇಳಬೇಡಿ. ಏಕೆಂದರೆ ನಾವು ಅನಾದಿ, ಅನಂತರು. ನಿಮ್ಮ ಸಹಜ ಸ್ವಭಾವದೊಂದಿಗೆ ಹೋಲಿಸಿದರೆ ಕಾಲ-ದೇಶಗಳೂ ಗಣನೆಗೆ ಬರುವುದಿಲ್ಲ. ಏನನ್ನಾದರೂ ಯಾವುದನ್ನಾದರೂ ನೀವು ಮಾಡಬಲ್ಲಿರಿ. ನೀವು ಸರ್ವಶಕ್ತರು.''

ನಮ್ಮ ದೇಶದ ಸನಾತನ ತತ್ತ್ವವಾದ ವೇದಾಂತವು ಸಾರುವ ಅತ್ಯದ್ಭುತವಾದ, ಅತ್ಯಾಶ್ಚರ್ಯಕರವಾದ ಸತ್ಯವಿದು. ನಮ್ಮೊಳಗೆಯೇ ಎಲ್ಲ ಶಕ್ತಿ ಅಡಕವಾಗಿದೆ. ಅದನ್ನು ವ್ಯಕ್ತಗೊಳಿಸುವುದಷ್ಟೇ ನಾವು ಮಾಡಬೇಕಾದ ಕಾರ್ಯ. ಹೇಗೆ ಅದನ್ನು ವ್ಯಕ್ತಗೊಳಿಸುವುದು? ಉದಾತ್ತ ಚಿಂತನೆಗಳಿಂದ, ದೇಹ-ಮನಸ್ಸು-ಬುದ್ಧಿಗಳ ಸಮರ್ಪಕ ಬಳಕೆಯಿಂದ ಹಾಗೂ ಶ್ರದ್ಧೆ, ಆತ್ಮವಿಶ್ವಾಸಗಳಿಂದ. ಮುನ್ನುಗ್ಗಿ ಕಾರ್ಯಪ್ರವೃತ್ತರಾಗಬೇಕು. ಇದನ್ನು ಕಲಿಯಲು ನಮ್ಮ ಮುಂದೆ ಮಹಾವ್ಯಕ್ತಿಗಳ, ವೀರಾಧಿವೀರರ, ಸ್ವಾಮಿ ವಿವೇಕಾನಂದರಂತಹ ಆಧ್ಯಾತ್ಮಿಕ ಮಹಾಪುರುಷರ ಜೀವನ-ಆದರ್ಶಗಳಿವೆ; ಅವರ ಜೀವನ ಹಾಗೂ ಉಪದೇಶಗಳ ಅನುಸರಣೆ — ಇಷ್ಟರಿಂದಲೇ ನಾವು ನಮ್ಮೊಳಗಿರುವ ಎಲ್ಲ ಶಕ್ತಿ-ಸಾಮರ್ಥ್ಯಗಳನ್ನೂ ಹೊರಹೊಮ್ಮಿಸಬಲ್ಲೆವು.

### ನೂರು ಸಲಹೆಗಳ ಗೊಂದಲ

'ಕೆಟ್ಟ ಮೇಲೆ ಬುದ್ಧಿ' ಎಂಬ ಗಾದೆಯ ಮಾತಿದೆ. ಸಾಕಷ್ಟು ಮಾನಸಿಕ ತೊಳಲಾಟ, ಖಿನ್ನತೆ, ಹತಾಶೆಗಳಿಂದ ಕಂಗೆಟ್ಟು, 'ನಾನು ಅತ್ಯಂತ ನಿರುಪಯೋಗಿಯಾಗಿಬಿಟ್ಟೆ' ಎಂಬ ಪರಿಸ್ಥಿತಿಯನ್ನು ತಂದುಕೊಂಡ ಬಳಿಕವಷ್ಟೇ ಅನೇಕರು ಹಲವು ಕಡೆ ಸಹಾಯಕ್ಕಾಗಿ ಅಲೆದಾಡುತ್ತಾರೆ. ಬಾಲ್ಯದಲ್ಲಿ ಉತ್ತಮ ಶಿಕ್ಷಣ, ಹಿರಿಯರ ಸಲಹೆ, ತಿಳಿದವರ ಮಾರ್ಗದರ್ಶನ ಇವುಗಳ ನೆರಳಿನಲ್ಲಿ ಬೆಳೆದು ಬಂದವರಿಗೆ ಇಂತಹ ಮಾನಸಿಕ ಸಮಸ್ಯೆಗಳನ್ನು ಎದುರಿಸುವ ವಿಧಾನ ತಿಳಿದಿರುತ್ತದೆ. ಯಾವುದೋ ಕಾರಣಕ್ಕಾಗಿ ಜೀವನದಲ್ಲಿ ವೈಫಲ್ಯವುಂಟಾದಾಗ ಅದನ್ನು ಎದುರಿಸುವ ಬಗೆ ಹೇಗೆ - ಎಂಬುದು ಗೊತ್ತಿಲ್ಲದೆ ಒದ್ದಾಡುವವರಿಗೆ, ಎಲ್ಲಿಗೆ ಹೋಗಿ ಯಾರ ಸಲಹೆ-ಸಹಾಯ ಪಡೆಯಲಿ ಎಂಬುದೇ ತಿಳಿಯದಾಗುತ್ತದೆ. ಇತರರ ಸಲಹೆಯ ಮೇರೆಗೆ ಅವರು ವೈದ್ಯರ ಬಳಿಗೋ, ಕೌನ್ಸೆಲಿಂಗ್ ಸೆಂಟರ್‌ಗಳಿಗೋ, ಮಾನಸಿಕ ತಜ್ಞರ ಬಳಿಗೋ, ಆಶ್ರಮಗಳಿಗೋ ಹೋಗುತ್ತಾರೆ. ಹತ್ತು ಕಡೆ ಹತ್ತಾರು ಸಲಹೆಗಳನ್ನು ಕೇಳುತ್ತಾರೆ; ಒಬ್ಬೊಬ್ಬರ ಸಲಹೆ ಒಂದೊಂದು ರೀತಿ. ಎಲ್ಲ ಸಲಹೆಗಳ ಗೊಂದಲದಿಂದ ಏನು ಮಾಡಬೇಕೆಂಬುದು ತಿಳಿಯದೆ ಮತ್ತಷ್ಟು ಕಂಗೆಡುತ್ತಾರೆ. ಈತನ ಸಮಸ್ಯೆಯೇನು, ಅದಕ್ಕೆ ಕಾರಣವೇನು, ಅದನ್ನು ಪರಿಹರಿಸುವ ಮಾರ್ಗ ಯಾವುದು ಇವನ್ನೆಲ್ಲ ಆಮೂಲಾಗ್ರವಾಗಿ ಪರಿಶೀಲಿಸಿ ಯೋಗ್ಯ ಸಲಹೆ ನೀಡುವ ಉತ್ತಮರೂ ಇಲ್ಲದಿಲ್ಲ. ಆದರೆ ಅಂಥವರು ವಿರಳ, ಇದ್ದರೂ ಸುಲಭವಾಗಿ ದೊರಕುವುದಿಲ್ಲ. ಇದರೊಂದಿಗೆ, ಹಣ ಗಳಿಸುವುದಕ್ಕಾಗಿ ಹತ್ತಾರು ಬಗೆಯ ನಿರುಪಯೋಗಿ ಸಲಹೆ ನೀಡುವ, ಭಯ ಹುಟ್ಟಿಸಿ ಅವರನ್ನು ಪದೇ ಪದೇ ಬರುವಂತೆ ಮಾಡುವ ಸಂಸ್ಥೆಗಳೂ, ವ್ಯಕ್ತಿಗಳೂ ಇಲ್ಲದಿಲ್ಲ. ಭವಿಷ್ಯ, ಜ್ಯೋತಿಷ್ಯ, ಮಂತ್ರತಂತ್ರಗಳ ಮೂಲಕ ಉತ್ತಮ ಭವಿಷ್ಯ ಕಟ್ಟಿಕೊಡುವ ಭರವಸೆ ನೀಡುವ ಅನೇಕ ಮಂದಿ ಆಧುನಿಕ ಪಂಡಿತರುಗಳಿಗೂ ಬರವಿಲ್ಲ. ಇಂಥ ಸಲಹೆಗಳ ಗೊಂದಲದಿಂದ ಮತ್ತಷ್ಟು ಕುಗ್ಗಿಹೋಗುವ ಸಂಭವವೇ ಅಧಿಕವೆಂಬುದನ್ನು ಇಲ್ಲಿ ಹೇಳಲೇಬೇಕಾಗಿದೆ.

ಹತಾಶೆಗೊಳಗಾದವರು ಮೊದಲು ತಮ್ಮಲ್ಲಿ ಪ್ರಶ್ನಿಸಿಕೊಳ್ಳಬೇಕು: ನಿಜವಾಗಿಯೂ ತನಗೆ ಎದ್ದು ನಿಂತು, ಬದುಕಿನಲ್ಲಿ ಸಾರ್ಥಕತೆಯನ್ನು ಕಂಡುಕೊಳ್ಳಬೇಕಾಗಿದೆಯೆ? ಹಾಗಿದ್ದರೆ, ಮೊದಲು ಜಾಡ್ಯವನ್ನು ಕಿತ್ತೊಗೆಯಬೇಕು. ಕಂಗೆಡಿಸುವ, ಚಿಂತೆಗಳನ್ನು ಮೂಡಿಸುವ ಯೋಚನೆಗಳನ್ನು ಇಲ್ಲವಾಗಿಸಬೇಕು. ಸರಿಯಾದ ಆಲೋಚನೆ, ಯೋಗ್ಯ ತಿಳುವಳಿಕೆ, ಹೇಗೆ ಕೆಲಸ ಮಾಡಬೇಕೆಂಬ ಅರಿವು ಇವುಗಳನ್ನು ಮೈಗೂಡಿಸಿಕೊಳ್ಳಬೇಕು. ಹುಟ್ಟಿನಿಂದಲೇ ಯಾರೂ ಎಲ್ಲ ಅರಿವನ್ನೂ ಹೊಂದಿರುವುದಿಲ್ಲ. ಪ್ರತಿಯೊಂದನ್ನೂ ನಾವು ಇತರರಿಂದಲೋ, ನಮ್ಮದೇ ಅನುಭವದಿಂದಲೋ ಕಲಿತುಕೊಂಡೇ ಬೆಳೆಯುತ್ತೇವೆ. ನಮ್ಮಲ್ಲಿರುವ ಸಂಪನ್ಮೂಲ — ಹಣ, ಕಾರ್ಯಕುಶಲತೆ, ವಿದ್ಯಾಭ್ಯಾಸ,(ಕೃಷಿಗೆ) ಭೂಮಿ — ಯಾವುದೇ ಆಗಿರಲಿ, ಅದೆಷ್ಟೇ ಅಲ್ಪವಾಗಿರಲಿ, ಅದನ್ನು ಸಮರ್ಥವಾಗಿ ಬಳಸಿಕೊಳ್ಳುವ ಬಗೆ ಹೇಗೆ ಎಂದು ಮೊದಲು ತಿಳಿದುಕೊಳ್ಳಬೇಕು. ಕ್ರಮೇಣ ಸಂಪನ್ಮೂಲವನ್ನು ದೃಢಗೊಳಿಸುತ್ತ, ವೃದ್ಧಿ ಮಾಡುತ್ತ ಹೋಗಬಹುದು. ಮುಂದೊಂದು ದಿನ ಅದು ನಮ್ಮ ಜೀವನವನ್ನು ಸಮರ್ಥವಾಗಿ ಪೋಷಿಸುವುದಲ್ಲದೆ, ಇನ್ನೂ ಹತ್ತಾರು ಜನರಿಗೆ ಜೀವನ ಪೋಷಕ ಅಂಶಗಳನ್ನು ನೀಡುವುದು.

### ಪ್ರಾಮಾಣಿಕ ಪ್ರಯತ್ನದ ಫಲ

ಒಬ್ಬ ಶ್ರೀಮಂತ ತನ್ನ ಇಬ್ಬರು ಮಕ್ಕಳು ವಯಸ್ಸಿಗೆ ಬಂದಾಗ ಅವರನ್ನು ತನ್ನ ಬಳಿಗೆ ಕರೆದ. ''ನನಗಿನ್ನು ವಯಸ್ಸಾಯಿತು. ವಿಶ್ರಾಂತಿಯ ಜೀವನ ಬೇಕೆನಿಸುತ್ತದೆ. ಯಾವಾಗಲಾದರೂ ಸತ್ತು ಹೋದೇನು. ನೀವಿಬ್ಬರೂ ಯುವಕರಾಗಿದ್ದೀರಿ. ಮುಂದೆ ಹೇಗೆ ಜೀವಿಸಬಲ್ಲಿರಿ ಎಂಬುದನ್ನು ನಾನು ಅರಿಯಬೇಕಾಗಿದೆ'' ಎಂದ. ಇಬ್ಬರು ಮಕ್ಕಳಲ್ಲಿ ಹಿರಿಯವನು ಕೇಳಿದ, ''ಅದೇಕೆ ಅಪ್ಪಾ, ನೀವು ಚೆನ್ನಾಗಿ ಸಂಪಾದಿಸಿ ಇಷ್ಟೊಂದು ಆಸ್ತಿಯನ್ನು ನಮಗಾಗಿ ಬಿಟ್ಟಿದ್ದೀರಲ್ಲಾ?'' ಕಿರಿಯವನು ಏನೂ ಮಾತನಾಡದೆ ಸುಮ್ಮನಿದ್ದ. ತಂದೆ ಹಿರಿಯ ಮಗನತ್ತ ನೋಡಿ, ''ನಾನು ದುಡಿದು

ಸಂಪಾದಿಸಿದ್ದೇನೆ, ನಿಜ. ನನಗೆ ಅದು ತೃಪ್ತಿ ನೀಡಿದೆ. ಆ ಸಂಪತ್ತನ್ನೆಲ್ಲ ನಿಮಗೆ ನೀಡಬಹುದು, ಆದರೆ ಅದು ನಿಮ್ಮದಾಗದು. ನೀವೇ ದುಡಿದು ಸಂಪಾದಿಸಿ. ಆಗ ಅದು ನಿಮ್ಮದಾಗುವುದು.'' ಆಗ ಹಿರಿಯ ಮಗನಿಗೆ ತಾನೇ ಸಂಪಾದಿಸುವುದು ಹೇಗೆ ಎಂಬುದು ತೋಚದಾಯಿತು. ''ನಾವು ಸುಖದಲ್ಲೇ ಬೆಳೆದಿದ್ದೇವೆ. ಓದು ಬರಹ ಬಿಟ್ಟರೆ ಏನೂ ಕಲಿತಿಲ್ಲ. ಈಗ ನಾವೇ ದುಡಿಯುವುದಾದರೂ ಹೇಗೆ?'' ಎಂದು ಅವನು ಕೇಳಿದ. ಅದಕ್ಕೆ ತಂದೆ, ''ನೀವಿಬ್ಬರೂ ಬೇರೆ ಊರುಗಳಿಗೆ ಹೋಗಿ. ನಿಮ್ಮ ವಿದ್ಯೆಯನ್ನು ಬಳಸಿಕೊಳ್ಳಿ. ನಾನು ನೀಡುವ ಮೂಲಧನವನ್ನು ಉಪಯೋಗಿಸಿ. ಎಷ್ಟು ಬೇಗನೆ ಸಂಪಾದಿಸಿಕೊಂಡು ಬರುತ್ತೀರೋ ನೋಡುತ್ತೇನೆ'' ಎಂದ. ಮರುದಿನವೇ ಅವನು ಮಕ್ಕಳಿಬ್ಬರನ್ನೂ ಬೇರೆ ಬೇರೆಯಾಗಿ ಕರೆದ. ಹಿರಿಯ ಮಗನಿಗೆ ಒಂದು ಲಕ್ಷ ರೂಪಾಯಿ ನೀಡಿದ. ''ಇದೇ ಮೂಲಧನ. ಇದನ್ನು ಜಾಗ್ರತೆಯಿಂದ ಬಳಸಿ, ಸಂಪಾದನೆ ಮಾಡು'' ಎಂದ. ಅನಂತರ ಎರಡನೇ ಮಗನನ್ನು ಕರೆದು ಒಂದೇ ಒಂದು ಭತ್ತವನ್ನು ನೀಡಿ, ''ಇದೇ ನಿನ್ನ ಮೂಲಧನ. ಹೇಗೆ ಇದನ್ನು ಉಪಯೋಗಿಸುತ್ತೀಯೋ ನೋಡು'' ಎಂದು ಕಳುಹಿಸಿಕೊಟ್ಟ.

ಮೊದಲನೆಯ ಮಗ ಹಲವು ಊರುಗಳೆಲ್ಲೆಲ್ಲ ಸುತ್ತಾಡಿದ. ಹಲವು ಮಂದಿ ಸ್ನೇಹಿತರನ್ನೂ ಸಂಪಾದಿಸಿದ. ವ್ಯಾಪಾರ ಆರಂಭಿಸೋಣ ಎಂದು ಎಲ್ಲರೂ ಯೋಚಿಸಿ, ಅಂಗಡಿಯೊಂದನ್ನು ತೆರೆದರು. ಕೆಲವೇ ದಿನಗಳಲ್ಲಿ ವ್ಯಾಪಾರ ವೃದ್ಧಿಯಾಯಿತು. ಇನ್ನೇನು, ಅಂಗಡಿ ಅವರಿಗೆ ಭಾರೀ ಲಾಭವನ್ನು ತರಲಾರಂಭಿಸಿದೆ ಎನ್ನುವಷ್ಟರಲ್ಲಿ ಒಬ್ಬ ಸ್ನೇಹಿತ ಅಲ್ಲಿದ್ದ ಎಲ್ಲ ಸೊತ್ತುಗಳನ್ನೂ ಅಪಹರಿಸಿ ಪರಾರಿಯಾದ. ದಿವಾಳಿಯಾದ ಅಂಗಡಿಯನ್ನು ಹೇಗೆ ನಿರ್ವಹಿಸಬೇಕೋ ತಿಳಿಯದೆ, ಸ್ನೇಹಿತರಲ್ಲಿ ಕಚ್ಚಾಟ ಆರಂಭವಾಯಿತು. ಆರೋಪ, ಪ್ರತ್ಯಾರೋಪಗಳಿಂದ ಜಗಳವಾಡುತ್ತ, ಎಲ್ಲರೂ ಈ ಮೊದಲನೆಯ ಮಗನನ್ನೇ ಅಪರಾಧಿಯನ್ನಾಗಿಸಿ, ಆ ಊರಿನಿಂದ ಓಡಿಸಿಬಿಟ್ಟರು. ನಾಲ್ಕು ತಿಂಗಳಲ್ಲೇ ಎಲ್ಲ ಮೂಲಧನವನ್ನೂ ಕಳೆದುಕೊಂಡು ಅವನು ಮನೆಗೆ ಮರಳಿದ.

ಎರಡನೇ ಮಗ ಒಂದೇ ಒಂದು ಭತ್ತವನ್ನು ಕೈಯಲ್ಲಿ ಹಿಡಿದುಕೊಂಡು ಆ ಊರಿನಿಂದ ಹೊರಟ. ಊರ ಹೊರಗೆ ಒಂದು ಮರದಡಿಯಲ್ಲಿ ವಿಶ್ರಾಂತಿ ತೆಗೆದುಕೊಳ್ಳುತ್ತ, ಕೈಯಲ್ಲಿದ್ದ ಭತ್ತವನ್ನೇ ನೋಡತೊಡಗಿದ. ಇದ್ದಕ್ಕಿದ್ದಂತೆ ಅವನ ಮನಸ್ಸಿನಲ್ಲಿ ಒಂದು ಯೋಚನೆ ಹೊಳೆಯಿತು: ''ಒಂದು ಭತ್ತವನ್ನು ಮಾತ್ರ ತಂದೆ ಕೊಟ್ಟಿದ್ದರಲ್ಲೇನೋ ವಿಶೇಷ ಅರ್ಥವಿದೆ. ಈ ಭತ್ತವನ್ನು ಪೈರು ಮಾಡಿದರೆ, ಅದು ಆರೋಗ್ಯಕರವಾಗಿ ಬೆಳೆದರೆ, ಅದರಿಂದ ನೂರು ಭತ್ತಗಳಾಗುವುವು. ಆ ನೂರರಿಂದ ಸಾವಿರ, ಸಾವಿರದಿಂದ, ಲಕ್ಷ ... ಓಹೋ! ಅರ್ಥವಾಯಿತು.'' ಭತ್ತದೊಳಗೆ ಅನಂತ ಸಾಧ್ಯತೆಗಳಿವೆ, ಆ ಸಾಧ್ಯತೆಗಳನ್ನು ತಾನು ಅರಿಯಲೆಂದೇ ತಂದೆ ಅದನ್ನು ಕೊಟ್ಟಿದ್ದಾರೆ ಎಂಬುದನ್ನು ಅವನು ಕಂಡುಕೊಂಡಿದ್ದ. ಯೋಗ್ಯ ಸ್ಥಳದಲ್ಲಿ, ಸರಿಯಾದ ಕ್ರಮದಲ್ಲಿ ಅವನು ಆ ಭತ್ತವನ್ನು ಬಿತ್ತಿ ಪೈರು ಮಾಡಿದ. ಪೈರನ್ನು ವೃದ್ಧಿಗೊಳಿಸುತ್ತ ಹೋದ; ಯೋಗ್ಯ ಕೃಷಿಕನಾದ. ಕಾಲಕ್ರಮದಲ್ಲಿ ಆಸ್ತಿ, ಸಂಪತ್ತು ಗಳಿಸಿದ.

ಅವನು ಮರಳಿ ತಂದೆಯ ಬಳಿಗೆ ಬಂದ. ತಾನು ಸಂಪಾದಿಸಿದ ಅಪಾರ ಸಂಪತ್ತನ್ನೆಲ್ಲ ತಂದೆಗೆ ಒಪ್ಪಿಸಿದ. ಅವನ ತಂದೆ ಆಗ ಹಾಸಿಗೆ ಹಿಡಿದಿದ್ದ. ಹಿರಿಯ ಮಗ ತಂದೆಯ ಆಸ್ತಿಯನ್ನೇ ನೋಡಿಕೊಳ್ಳುತ್ತಿದ್ದ. ಕಿರಿಯ ಮಗನ ಕಥೆಯನ್ನೆಲ್ಲ ಕೇಳಿದ ತಂದೆ, ಹಿರಿಯ ಮಗನನ್ನು ಬಳಿಗೆ ಕರೆದು ಹೇಳಿದ, ''ನೋಡು, ನಿನ್ನ ತಮ್ಮ ಜೀವನ ಎಂದರೇನು ಎಂಬುದನ್ನು ಕಲಿತಿದ್ದಾನೆ. ನಾನು ಅವನಿಗೆ ಕೊಟ್ಟ ಮೂಲಧನ ಒಂದೇ ಒಂದು ಭತ್ತ. ಇಂದು ಅವನು ಸಾವಿರ ಮೂಟೆ ಭತ್ತ ತಂದು ಹಾಕಿದ್ದಾನೆ. ಅವನಿಗೆ ನಾನು ಭತ್ತದ ಮೂಲಕ ನೀಡಿದ್ದೇನೆಂದರೆ, ಬದುಕುವುದು ಹೇಗೆ ಎಂಬ ವಿದ್ಯೆಯನ್ನು. ನಿನಗೂ ನಾನು ಅದನ್ನೇ ಕೊಟ್ಟಿದ್ದೆ. ಆದರೆ ನೀನು ಕಲಿಯಲಿಲ್ಲ.'' ಹಿರಿಯ ಮಗನಿಗೆ ಅದು ಅರ್ಥವಾಯಿತು. ತಮ್ಮನ ದುಡಿಮೆ, ಶ್ರಮ, ಪ್ರಯತ್ನಗಳನ್ನು ಕಂಡು, ಅವನಲ್ಲೂ ಹೊಸ ಜೀವನದ ಬೆಳಕು ಮಿಂಚಿತು.

ಜೀವನ ಉತ್ತಮಗೊಳ್ಳಲು ಉತ್ತಮ ಭಾವನೆಗಳು ಬೇಕು. ಅಂಥ ಭಾವನೆಗಳು ನಮ್ಮಲ್ಲಿ ಮೂಡಿ ಬರಬೇಕಾದರೆ, ದೈಹಿಕ ಆರೋಗ್ಯ ಹಾಗೂ ಮಾನಸಿಕ ಆರೋಗ್ಯ ಉತ್ತಮವಾಗಿರಬೇಕು. ಇದರೊಂದಿಗೆ ಕಲಿಯುವ ಗುಣ, ಇತರರೊಂದಿಗೆ ಹಿತಕರವಾದ ಸ್ನೇಹಸಂಬಂಧ, ಪ್ರಾಮಾಣಿಕತೆ, ಸತತ ಪ್ರಯತ್ನಪಡುವ ಸಾಮರ್ಥ್ಯ ಇವುಗಳನ್ನು ಹೊಂದಿರಬೇಕು. ಉದಾಸೀನವಿಲ್ಲದೆ ಶ್ರಮಪಡುವ ವ್ಯಕ್ತಿ ಯೋಗ್ಯ ಫಲವನ್ನು ಪಡೆದೇ ತೀರಬೇಕು. ಇದರೊಂದಿಗೆ ಯಾವುದೇ ಸಮಸ್ಯೆಗಳನ್ನು ಎದುರಿಸಬಲ್ಲ ಮನಃಶಕ್ತಿ, ದೃಢ ವಿಶ್ವಾಸ, ಆತ್ಮಶ್ರದ್ಧೆ ಇವುಗಳನ್ನು ಬೆಳೆಸಿಕೊಳ್ಳಬೇಕು. ''ನಾವು ಏನಾಗಿರುವೆವೋ ಅದಕ್ಕೆ ನಾವೇ ಹೊಣೆ. ನಾವು ಏನಾಗಬೇಕೆಂದು ನಮ್ಮ ಇಚ್ಛೆಯಿರುವುದೋ, ಹಾಗಾಗಲು ಶಕ್ತಿಯು ನಮ್ಮಲ್ಲಿಯೇ ಇರುವುದು'' ಎನ್ನುತ್ತಾರೆ ಸ್ವಾಮಿ ವಿವೇಕಾನಂದರು. ಸ್ವಾಮೀಜಿಯವರ ಉಪದೇಶದ ನುಡಿಗಳು ಎಂತಹ ಸೋಲು, ಚಿಂತೆ, ಹತಾಶೆಗಳ ನಡುವಿನಿಂದಲೂ ನಮ್ಮನ್ನು ಬಡಿದೆಬ್ಬಿಸಿ ಕಾರ್ಯಪ್ರವೃತ್ತರನ್ನಾಗಿ ಮಾಡುವಷ್ಟು ಶಕ್ತಿಪೂರ್ಣವಾಗಿವೆ. ಸ್ವಾಮೀಜಿಯವರ ಕೃತಿಗಳ ಅಧ್ಯಯನವೊಂದೇ ಹಲವರ ಬದುಕನ್ನು ಬದಲಾಯಿಸಿದೆ, ಈಗಲೂ ನಿರಂತರ ಸ್ಫೂರ್ತಿ ನೀಡುತ್ತಿದೆ. ✷

### ಏಪ್ರಿಲ್ ತಿಂಗಳ ಕಾರ್ಯಕ್ರಮಗಳು

| | | |
|---|---|---|
| ೧೧ | ಬುಧವಾರ | ಏಕಾದಶಿ |
| ೧೮ | ಬುಧವಾರ | ಶ್ರೀ ಬಸವ ಜಯಂತಿ |
| ೨೦ | ಶುಕ್ರವಾರ | ಶ್ರೀ ಶಂಕರ ಜಯಂತಿ |
| ೨೧ | ಶನಿವಾರ | ಶ್ರೀ ರಾಮಾನುಜ ಜಯಂತಿ |
| ೨೬ | ಗುರುವಾರ | ಏಕಾದಶಿ |
| ೨೯ | ಭಾನುವಾರ | ಶ್ರೀ ಬುದ್ಧ ಪೂರ್ಣಿಮೆ |

# ಮುಕ್ತಿಗೆ ದಾರಿ

❋ ಬಂಧನಕ್ಕೆ ಕಾರಣ ಕಾಮಕಾಂಚನ. ಕಾಮಕಾಂಚನವೇ ಸಂಸಾರ. ಕಾಮಕಾಂಚನವೇ ಭಗವಂತನ ದರ್ಶನ ಮಾಡಲು ಬಿಟ್ಟುಕೊಡ ಲೊಲ್ಲದು. (ಒಂದು ಚೌಕವನ್ನು ತಮ್ಮ ಮುಖದ ಎದುರು ಹಿಡಿದುಕೊಂಡು) ಈಗ ನನ್ನ ಮುಖ ನಿಮಗೆ ಕಾಣುವುದೆ? ಇಲ್ಲ. ಆವರಣವೆಂಬುದು ಇದೇ. ಈ ಕಾಮಕಾಂಚನವೆಂಬ ಆವರಣ ಹೋಯಿತು ಎಂದರೆ ಚಿದಾನಂದನ ಸಾಕ್ಷಾತ್ಕಾರ.

❋ ಮುಖ್ಯವಾಗಿ ಮಾಡಬೇಕಾದುದೇನೆಂದರೆ, ಹೇಗಾದರೂ ಮಾಡಿ ಮನಸ್ಸನ್ನು ಭಗವಂತನ ಕಡೆಗೆ ತಿರುಗಿಸಬೇಕು. ಒಮ್ಮೆಯೂ ಆತನನ್ನು ಮರೆಯಕೂಡದು. ಅದು ತೈಲಧಾರೆಯಂತೆ ಅವಿಚ್ಛಿನ್ನವಾಗಿರಬೇಕು. ಒಂದು ಇಟ್ಟಿಗೆಯನ್ನೇ ಆಗಲಿ ಒಂದು ಕಲ್ಲನ್ನೇ ಆಗಲಿ ಅದೇ ಭಗವಂತ ಎಂದು ಭಾವಿಸಿ ಶ್ರದ್ಧಾಭಕ್ತಿಯಿಂದ ಪೂಜಿಸುವುದಾದರೆ, ಅದರಿಂದಲೇ, ಭಗವಂತನ ಕೃಪೆಯಿಂದ ಆತನ ದರ್ಶನ ದೊರೆತುಬಿಡುವ ಸಂಭವ.

❋ ಸಂಸಾರದಲ್ಲಿ ಇರಬೇಕಾಗಿದ್ದರೆ ಸತ್ಯವಚನದಲ್ಲಿ ಅಚಲ ಶ್ರದ್ಧೆ ಇರಬೇಕು. ಸತ್ಯದಿಂದಲೇ ಭಗವಂತನ ಸಾಕ್ಷಾತ್ಕಾರವನ್ನು ಪಡೆಯಬಹುದು.

❋ ಯಾರಿಗೆ ಸಮಯವಿರುವುದೋ, ಅವರು ಧ್ಯಾನ, ಭಜನೆ ಮಾಡಲೇಬೇಕು. ಆದರೆ ಯಾರಿಗೆ ಸಮಯವಿಲ್ಲವೋ ಅವರು ದಿನಕ್ಕೆ ಎರಡು ವೇಳೆ ಹೃತ್ಪೂರ್ವಕವಾಗಿ ಭಗವಂತನಿಗೆ ನಮಸ್ಕಾರ ಹಾಕಲಿ. ಆತ ಅಂತರ್ಯಾಮಿ. ಆತನಿಗೆ ಗೊತ್ತಿದೆ. ಇವರು ಇನ್ನೇನು ತಾನೆ ಮಾಡಿಯಾರು, ಇವರಿಗೆ ಬೇಕಾದಷ್ಟು ಕೆಲಸಕಾರ್ಯಗಳಿವೆಯಲ್ಲ, ಪಾಪ ಎಂದು. ಆತನನ್ನು ಪ್ರಾರ್ಥಿಸಲು ನಿಮಗೆ ಸಮಯವಿಲ್ಲ; ಆದ್ದರಿಂದ ಆತನಿಗೆ ನಿಮ್ಮ ವಕಾಲತ್ತನ್ನು ವಹಿಸಿಬಿಡಿ. ಆದರೆ ನೋಡಿಕೊಳ್ಳಿ. ಆತನ ಸಾಕ್ಷಾತ್ಕಾರವನ್ನು ಪಡೆದುಕೊಳ್ಳದೆ ಹೋದಿರಿ ಎಂದರೆ, ಆತನ ದರ್ಶನವನ್ನು ಮಾಡಿಕೊಳ್ಳದೆ ಹೋದಿರಿ ಎಂದರೆ, ಜೀವನ ಬರಿದೆ ವ್ಯರ್ಥ.

❋ ತ್ಯಾಗವನ್ನು ಮಾಡದೆ ಭಗವಂತನ ಸಾಕ್ಷಾತ್ಕಾರವನ್ನು ಪಡೆಯುವ ಬಗೆ ಹೇಗೆ? ಒಂದು ವಸ್ತುವಿನ ಮೇಲೆ ಇನ್ನೊಂದು ವಸ್ತುವನ್ನು ಇಟ್ಟಿದೆ ಅಂತ ಇಟ್ಟುಕೊ. ಮೇಲಿನದನ್ನು ತೆಗೆಯದೆ ಕೆಳಗಿನದನ್ನು ತೆಗೆದುಕೊಳ್ಳುವ ಬಗೆ ಹೇಗೆ?

❋ ನಿಷ್ಕಾಮ ಭಾವನೆಯಿಂದ ಭಗವಂತನಿಗೆ ಪ್ರಾರ್ಥನೆ ಮಾಡಬೇಕು. ಆದರೆ ಸಕಾಮ ಭಾವನೆಯಿಂದ ಪ್ರಾರ್ಥನೆ ಮಾಡುತ್ತ ಮಾಡುತ್ತ ಕೊನೆಗೆ ಅದು ನಿಷ್ಕಾಮ ಭಾವನೆಯಾಗಿ ಪರಿಣಮಿಸಿಬಿಡುತ್ತದೆ. ಧ್ರುವ ರಾಜ್ಯಕ್ಕಾಗಿ ತಪಸ್ಸು ಮಾಡಿದ. ಆದರೆ ಕೊನೆಯಲ್ಲಿ ಆತನಿಗೆ ಭಗವಂತನ ದರ್ಶನ ದೊರೆಯಿತು. ಆತ ಹೇಳಿದ: 'ಗಾಜಿನ ಮಣಿಗಾಗಿ ಹುಡುಕುತ್ತಿರುವಾಗ ಚಿನ್ನ ದೊರೆತುದೇ ಆದರೆ ಅದನ್ನಾರು ಬಿಟ್ಟುಬಿಡುತ್ತಾರೆ?'

❋ ಸತ್ತ್ವಗುಣ ಉಂಟಾದಾಗ ಮಾತ್ರ ಭಗವಂತನ ಸಾಕ್ಷಾತ್ಕಾರವನ್ನು ಪಡೆದುಕೊಳ್ಳಬಹುದು. ದಾನಾದಿ ಕರ್ಮಗಳನ್ನು ಸಂಸಾರಿಗಳು ಪ್ರಾಯಿಕವಾಗಿ ಸಕಾಮಭಾವನೆಯಿಂದಲೇ ಮಾಡುತ್ತಾರೆ. ಅದು ಒಳ್ಳೆಯದಲ್ಲ. ಅದನ್ನು ನಿಷ್ಕಾಮ ಭಾವನೆಯಿಂದ ಮಾಡಿದರೆ ಅದು ಬಹಳ ಒಳ್ಳೆಯದು. ಆದರೆ ಹಾಗೆ ಮಾಡುವುದು ಬಹಳ ಕಠಿಣವೇನೋ ನಿಜ.

❋ ಮಗುವಿನಂಥ ವಿಶ್ವಾಸಬೇಕು. ಮಗು ತಾಯನ್ನು ನೋಡಲು ಯಾವ ರೀತಿಯಾದ ವ್ಯಾಕುಲತೆಯನ್ನು ತೋರಿಸುವುದೊ, ಆ ರೀತಿಯಾದ ವ್ಯಾಕುಲತೆ ಬೇಕು. ಅಂಥ ವ್ಯಾಕುಲತೆ ಉಂಟಾಯಿತು ಎಂದರೆ ಅರುಣೋದಯವಾದ ಹಾಗೆಯೇ. ಅರುಣೋದಯವಾದ ನಂತರ ಸೂರ್ಯೋದಯ ವಾಗಲೇ ಬೇಕು. ಅಂಥ ವ್ಯಾಕುಲತೆಯುಂಟಾದ ಒಡನೆಯೇ ಭಗವಂತನ ದರ್ಶನ ದೊರೆಯುತ್ತದೆ.

❋ ಸಂಸಾರದಲ್ಲಿದ್ದು ಸಾಧನೆ ಮಾಡುವುದು ಎಂದರೆ ಬಹಳ ಕಷ್ಟ. ಅನೇಕ ಪ್ರತಿಕೂಲಗಳಿವೆ: ರೋಗ, ಶೋಕ, ದಾರಿದ್ರ್ಯ, ಹೆಂಡತಿಯೊಡನೆ ಒಮ್ಮನಸ್ಸಿಲ್ಲದಿರುವುದು, ಅವಿಧೇಯ, ಮೂರ್ಖ, ಹಠಮಾರಿ ಮಕ್ಕಳು ಹುಟ್ಟುವುದು ಇತ್ಯಾದಿ. ನಾನೇನೂ ನಿಮಗೆ ಇವುಗಳ ಪಟ್ಟಿಯನ್ನು ಕೊಡಬೇಕಾಗಿಲ್ಲ. ಆದರೂ ಮಾರ್ಗವಿದೆ. ಆಗಾಗ ನಿರ್ಜನಪ್ರದೇಶಕ್ಕೆ ಹೋಗಿ ಭಗವಂತನಿಗೆ ಪ್ರಾರ್ಥನೆ ಸಲ್ಲಿಸಬೇಕು. ಆತನ ಸಾಕ್ಷಾತ್ಕಾರವನ್ನು ಪಡೆದುಕೊಳ್ಳಲು ಪ್ರಯತ್ನ ಮಾಡಬೇಕು.

❋ ಒಂದು ಸ್ವಲ್ಪ ಜಪಮಾಡಿ ಉದ್ದೀಪನವಾಗಿಬಿಟ್ಟ ಮಾತ್ರಕ್ಕೇ ಭಾವಿಸಬೇಕಾಗಿಲ್ಲ ದೊರೆಯಬೇಕಾದ್ದೆಲ್ಲ ದೊರೆತುಬಿಟ್ಟಿತು ಎಂದು. ಕರ್ಮ ಎಂದಿಗೂ ಜೀವನದ ಉದ್ದೇಶವಲ್ಲ. ಇನ್ನೂ ಮುಂದುವರಿ; ಆಗ ಕರ್ಮವನ್ನು ನಿಷ್ಕಾಮಭಾವನೆಯಿಂದ ಮಾಡಲು ಸಾಧ್ಯವಾಗುತ್ತದೆ. ಆದರೆ ನಿಷ್ಕಾಮಕರ್ಮ ಮಾಡುವುದು ಬಹಳ ಕಷ್ಟ. ಆದ್ದರಿಂದ ಭಕ್ತಿಯಿಂದೊಡಗೂಡಿದ ವ್ಯಾಕುಲತೆಯಿಂದ ಭಗವಂತನಿಗೆ ಪ್ರಾರ್ಥನೆ ಸಲ್ಲಿಸು; 'ಹೇ ಭಗವಂತ, ನಿನ್ನ ಪಾದ ಪದ್ಮಗಳಲ್ಲಿ ನನಗೆ ಭಕ್ತಿಯುಂಟಾಗುವಂತೆ ಮಾಡು. ಕೆಲಸಗಳನ್ನು ಕಡಮೆ ಮಾಡಿಕೊಡು.ಯಾವ ಯಾವ ಕೆಲವು ಕರ್ಮಗಳನ್ನು ನಾನು ಮಾಡಲೇಬೇಕಾಗಿರುವುದೋ ಅವನ್ನು ನಿಷ್ಕಾಮಭಾವನೆಯಿಂದ ಮಾಡಲು ಶಕ್ತವಾಗುವಂತೆ ಮಾಡು.' ಇನ್ನೂ ಮುಂದುವರಿದರೆ ಭಗವಂತನ ಸಾಕ್ಷಾತ್ಕಾರ ದೊರೆಯುತ್ತದೆ. ಕ್ರಮೇಣ ಆತನೊಡನೆ ನೀನು ಮಾತುಕತೆಯನ್ನೂ ಆಡಬಹುದು.

ಶ್ರೀರಾಮಕೃಷ್ಣ ವಚನವೇದದಿಂದ

# ‘ನೀವೆಲ್ಲ ನನ್ನವರು’

**‘ಶಿವಾನೀ’**

ಶ್ರೀರಾಮಕೃಷ್ಣರ ಮಾನಸಪುತ್ರರೂ, ಸ್ವಾಮಿ ವಿವೇಕಾನಂದರ ಗುರುಭಾಯಿಗಳಲ್ಲಿ ಪ್ರಮುಖರೂ ಆಗಿದ್ದ ಸ್ವಾಮಿ ಬ್ರಹ್ಮಾನಂದರು ರಾಮಕೃಷ್ಣ ಮಹಾಸಂಘದ ಮೊದಲ ಅಧ್ಯಕ್ಷರಾಗಿದ್ದರು. ಅಗಾಧ ಆಧ್ಯಾತ್ಮಿಕ ಶಕ್ತಿಯ ಆಗರವಾಗಿದ್ದ ಅವರ ದಿವ್ಯಸ್ಪರ್ಶಕ್ಕೆ ಒಳಗಾಗಿ ಭಗವಂತನೆಡೆಗೆ ಸೆಳೆಯಲ್ಪಟ್ಟವರು ಅನೇಕ ಮಂದಿ. ಅಂಥ ಕೆಲವು ಕಥೆಗಳನ್ನು ಇಲ್ಲಿ ಬಂಗಾಳಿ ಗ್ರಂಥಗಳಿಂದ ಸಂಗ್ರಹಿಸಿ ನೀಡಲಾಗಿದೆ. ಉತ್ತಮ ಬರಹಗಾರರಾಗಿರುವ ಲೇಖಕಿ ದಿವ್ಯತ್ರಯರ ಭಕ್ತರು.



ಜಗತ್ತಿನಲ್ಲಿ ಪ್ರೀತಿ ಒಂದು ಅಪರಾಜಿತವಾದ ಶಕ್ತಿ. ಜೀವವೊಂದು ತನ್ನ ಸ್ವಭಾವಕ್ಕನುಗುಣವಾಗಿ ವಿಕಸನ ಹೊಂದಿ ಸಾರ್ಥಕತೆಯನ್ನು ಕಂಡುಕೊಳ್ಳಲು ಪ್ರೀತಿಯ ಅಗತ್ಯ ಅಷ್ಟಿಷ್ಟಲ್ಲ. ವೈವಿಧ್ಯಪೂರ್ಣ ಹಿನ್ನೆಲೆಗಳು, ಸಂಸ್ಕಾರಗಳು ಮತ್ತು ಅಭಿರುಚಿಗಳುಳ್ಳ ಜನರಿರುವ ಸಮಾಜದಲ್ಲಿ ವ್ಯಕ್ತಿಯೊಬ್ಬ ಚಿರಂತನ ಮೌಲ್ಯಗಳನ್ನು ಸದಾ ಪಾಲಿಸುತ್ತ, ತನ್ನೊಳಗಿನ ಪೂರ್ಣ ಸತ್ತ್ವಕ್ಕೆ ಅನುಗುಣವಾಗಿ ಸಾಧನೆಯನ್ನು ಮಾಡುತ್ತ, ಸಮಾಜಕ್ಕೆ ಹಿತವಾಗುವಂತೆ ಬಾಳಲು ಪ್ರೀತಿ ದೃಢವಾದ ಊರುಗೋಲಿನಂತೆ ಆಸರೆಯಾಗಬಲ್ಲುದು. ದುರ್ಮಾರ್ಗಕ್ಕೆ ಜಾರಿದ ವ್ಯಕ್ತಿಗಳನ್ನು ಕೆಲಮಟ್ಟಿಗೆ ಹತೋಟಿಯಲ್ಲಿಡಲು ಕಾನೂನು ನೆರವಾಗಬಲ್ಲುದಾದರೂ, ಅವರನ್ನು ಮತ್ತೆ ಸರಿದಾರಿಯಲ್ಲಿ ನೆಲೆ ನಿಲ್ಲಿಸಲು ಪ್ರೀತಿಗೆ ಪರ್ಯಾಯ ಎನಿಸಬಹುದಾದ ಮತ್ತೊಂದು ಶಕ್ತಿಯಿಲ್ಲ! ಸಾಮಾನ್ಯರ ಪ್ರೀತಿಯೇ ಇಷ್ಟು ಶಕ್ತಿಶಾಲಿಯಾಗಿರುವಾಗ ಮಹಾಜ್ಞಾನಿಗಳ ಮಮತ್ವರಹಿತವೂ ನಿಸ್ವಾರ್ಥವೂ ಆದ ಪ್ರೀತಿ ವಾತ್ಸಲ್ಯದ ಪರಿಣಾಮಕಾರಿತೆ ಎಂಥದ್ದಿರಬಹುದು! ಇನ್ನು ಮಹಾಪುರುಷರು ಆ ನಿರಪೇಕ್ಷವಾದ ವಾತ್ಸಲ್ಯವನ್ನು ಮಮತೆಯ ಭರಣಿಯೊಳಗಿಟ್ಟು ಅನುಗ್ರಹಿಸುವುದಾದರೆ, ಅದರ ತಾರಕ ಶಕ್ತಿಗೆ ಮಿತಿ ಎಲ್ಲಿದೆ?

ಅತ್ಯುನ್ನತ ಆಧ್ಯಾತ್ಮಿಕ ಅನುಭೂತಿ, ಅಸದೃಶ ಪಾವಿತ್ರ್ಯ, ಅಜೇಯ ಪ್ರಭುಶಕ್ತಿ, ಅಪರಿಮಿತ ಲೋಕಕಾರುಣ್ಯ ಇವುಗಳಲ್ಲಿ ಒಂದೊಂದು ಅಂಶಕ್ಕೂ ನಿರ್ವಚನ ಎನಿಸಬಹುದಾದ ವ್ಯಕ್ತಿತ್ವ ಶ್ರೀರಾಮಕೃಷ್ಣರ ಮಾನಸಪುತ್ರ ಸ್ವಾಮಿ ಬ್ರಹ್ಮಾನಂದರದು. ಆ ವ್ಯಕ್ತಿತ್ವದ ಘನತೆ, ವೈಶಾಲ್ಯ, ಔನ್ನತ್ಯ, ಗಾಢತೆ ಮತ್ತು ಮಾಧುರ್ಯಗಳು ಮಾತಿಗೆ ನಿಲುಕದ ಮಹತ್ತರ ತತ್ತ್ವಗಳ ವ್ಯಕ್ತರೂಪ. ಬಳಿಸಾರಿದವರನ್ನು ಭವದ ಬೇಗೆಯಿಂದ ಬಿಡಿಸಿ, ಆಧ್ಯಾತ್ಮಿಕ ಪಥದಲ್ಲಿ ಮುನ್ನಡೆಸಿ, ತಮ್ಮೆದೆಯ ತೆಕ್ಕೆಯಲ್ಲೇ ಚಿರಕಾಲ ಉಳಿಸಿಕೊಳ್ಳುವ ವಾತ್ಸಲ್ಯಸಿಂಧು ಸ್ವಾಮಿ ಬ್ರಹ್ಮಾನಂದರು. ಆದರೆ ಅವರು ತಮ್ಮ ವಾತ್ಸಲ್ಯವನ್ನು ಸುಲಭವಾಗಿ ವ್ಯಕ್ತಪಡಿಸುವವರಲ್ಲ. ಊಹುಂ, ಹಾಗೆನ್ನುವುದು ಸರಿಯಾಗಲಾರದು! ಅಮಿತವಾದ ಅವರ ಪ್ರೀತಿ, ಅಭಿವ್ಯಕ್ತಿಯ ಇತಿಮಿತಿಯೊಳಗೆ ಸಿಲುಕಲು ಸಾಧ್ಯವಾಗುವುದಾದರೂ ಹೇಗೆ? ಜೊತೆಗೆ, ಅವರು ಆಗಾಗ ‘ನಾನು ಪ್ರೀತಿಸುವ ವ್ಯಕ್ತಿಗೆ, ನಾನು ಅವನನ್ನು ಪ್ರೀತಿಸುತ್ತಿದ್ದೇನೆ ಎನ್ನುವುದು ತಿಳಿದುಬಿಟ್ಟರೆ, ಇನ್ನು ಅದು ಪ್ರೀತಿಯಾಗುವುದಾದರೂ ಹೇಗೆ?’ ಎನ್ನುತ್ತಿದ್ದರು. ಆದರೆ ಕೆಲವು ಅಪರೂಪದ ಸನ್ನಿವೇಶಗಳಲ್ಲಿ ಭಾಗ್ಯಶಾಲಿ ವ್ಯಕ್ತಿಗಳ ಬಳಿ ಅವರು ತಮ್ಮ ವಾತ್ಸಲ್ಯವನ್ನು ಮನಬಿಚ್ಚಿ ವ್ಯಕ್ತಪಡಿಸಿದ್ದು ಮಾತ್ರವಲ್ಲ, ತಮಗೆ ಪ್ರೀತಿಪಾತ್ರರಾದ ಆ ವ್ಯಕ್ತಿಗಳನ್ನು ತಾವು ಎಷ್ಟರ ಮಟ್ಟಿಗೆ ತಮ್ಮ ಸ್ವಂತದವರು ಎಂದು ಸ್ವೀಕರಿಸಿದ್ದೇವೆ ಎನ್ನುವುದನ್ನೂ ಕಳಕಳಿಯ ಮಾತುಗಳಲ್ಲಿ ತಿಳಿಸುತ್ತಿದ್ದರು. ಆ ಪರಮ ಪ್ರಾಮಾಣಿಕ ಮಾತುಗಳ ಮಾಧುರ್ಯ ಮತ್ತು ಅವಿಸ್ಮರಣೀಯತೆ, ಭಾವನೆಗೆ ಮಾತ್ರ ಭಾಗಶಃ ನಿಲುಕುವಂಥದ್ದು! ಇನ್ನು

ಅವುಗಳ ಪರಿಣಾಮ? ಕೆಳಗಿನ ಎರಡು ಸನ್ನಿವೇಶಗಳ ಅವಲೋಕನವೇ ಅದಕ್ಕೆ ಉತ್ತರ!

ಒಬ್ಬ ಯುವಕ 'ಶ್ರೀ ರಾಮಕೃಷ್ಣ ಕಥಾಮೃತ' (ಕನ್ನಡದಲ್ಲಿ 'ವಚನವೇದ') ಗ್ರಂಥವನ್ನು ಓದಿ ಶ್ರೀರಾಮಕೃಷ್ಣರತ್ತ ಆಕರ್ಷಿತನಾದ. ಆದರೆ ಆ ಗ್ರಂಥದಲ್ಲಿ ನಿಜಕ್ಕೂ ಅವನ ಹೃನ್ಮನಗಳನ್ನು ಸಂಪೂರ್ಣವಾಗಿ ಸೂರೆಗೊಂಡ ಮಹಾವ್ಯಕ್ತಿ ಶ್ರೀರಾಮಕೃಷ್ಣರ ಮಾನಸಪುತ್ರ ರಾಖಾಲ. ಆ ಯುವಕನಿಗೆ, ಕಥಾಮೃತದಲ್ಲಿ ರಾಖಾಲನಿರುವ ಭಾಗಗಳೆಲ್ಲ ಅಸೀಮ ಆನಂದವನ್ನು ಒಸರುವ ರಸಘಟ್ಟಿಗಳು ಎನಿಸಿ ಆಪ್ತವಾದವು. ಶ್ರೀರಾಮಕೃಷ್ಣರ ಪ್ರೀತಿಯ ರಾಖಾಲನೇ 'ಸ್ವಾಮಿ ಬ್ರಹ್ಮಾನಂದ' ಎನ್ನುವ ಸಂನ್ಯಾಸ ನಾಮದಿಂದ ರಾಮಕೃಷ್ಣ ಮಹಾಸಂಘದ ಮಹಾಧ್ಯಕ್ಷರಾಗಿರುವ ವಿಷಯವೂ ಆ ಯುವಕನಿಗೆ ಯಾರಿಂದಲೋ ತಿಳಿದುಬಂತು. ಈಗ ಅವನ ಅಂತರಂಗದೊಳಗೆ ಸ್ವಾಮಿ ಬ್ರಹ್ಮಾನಂದರ ದರ್ಶನದಿಂದಲ್ಲದೆ ಇನ್ನಾವುದರಿಂದಲೂ ಉಪಶಮನಗೊಳ್ಳದ ನಿರಂತರ ಚಡಪಡಿಕೆ!

ಆ ಯುವಕ ಸ್ವಾಮಿ ಬ್ರಹ್ಮಾನಂದರನ್ನು ಪ್ರಪ್ರಥಮ ಬಾರಿ ಸಂಧಿಸಿದ್ದು ಪುರೀಕ್ಷೇತ್ರದಲ್ಲಿದ್ದ 'ಶಶಿನಿಕೇತನ' ಎನ್ನುವ ಬಂಗಲೆಯಲ್ಲಿ. ಅದು ಮುಸ್ಸಂಜೆಯ ಸಮಯ. ಶಶಿನಿಕೇತನದ ಮುಂದಿದ್ದ ಉದ್ಯಾನವನದಲ್ಲಿನ ಮನೋಹರ ಕುಸುಮಗಳ ಕಂಪು ಮನೆಯೊಳಗಿನ ವಾತಾವರಣದಲ್ಲಿ ಮಾಧುರ್ಯವನ್ನು ತುಂಬಿಸಿತ್ತು. ಅಲ್ಲಿನ ವಿಶಾಲವಾದ ಹಜಾರದಲ್ಲಿ ಸೌಮ್ಯ, ಗಂಭೀರ ವ್ಯಕ್ತಿತ್ವದ, ಸಮುನ್ನತ ನಿಲುವಿನ ಸ್ವಾಮಿ ಬ್ರಹ್ಮಾನಂದರು ಕುರ್ಚಿಯ ಮೇಲೆ ಕುಳಿತು ಹುಕ್ಕಾ ಸೇದುತ್ತಿದ್ದರು. ಅವರ ಮುಖಾರವಿಂದದಲ್ಲಿ ತಪೋಜನ್ಯವಾದ ದೀಪ್ತಿ, ನೋಟದಲ್ಲಿ ಪರಿಶುದ್ಧ ಪ್ರೇಮದ ಪ್ರಭೆ. ಯುವಕ ಅವರ ಪಾದಪದ್ಮಗಳ ಮೇಲೆ ಶಿರಸ್ಸನ್ನಿರಿಸಿ ಪ್ರಣಾಮ ಸಲ್ಲಿಸಿದ. ಕಡುಬಿಸಿಲಲ್ಲಿ ಕುದಿಯುತ್ತಿದ್ದ ಧರೆಯೊಡಲ ಮೇಲೆ ಒಮ್ಮೆಗೇ ಬೆಳದಿಂಗಳ ಶೀತಲ ಸ್ರೋತ ಪ್ರವಹಿಸಿದಂತಾಯಿತು! ಈಗ ಸ್ವಾಮಿ ಬ್ರಹ್ಮಾನಂದರು ಸ್ನೇಹಪೂರಿತ ದನಿಯಲ್ಲಿ ಅವನನ್ನು ಕೇಳಿದರು: ''ನಾನು ನಿನ್ನನ್ನು ಈ ಮೊದಲೇ ನೋಡಿದ್ದೇನೆ, ಅಲ್ಲವೆ?'' ಆ ಯುವಕ ಹೇಳಿದ: ''ಇಲ್ಲ ಮಹಾರಾಜ್, ನಾನು ತಮ್ಮನ್ನು ಭೇಟಿ ಮಾಡುತ್ತಿರುವುದು ಇದೇ ಮೊದಲು.'' ಅವರು ಮತ್ತೆ ಹೇಳಿದರು: ''ಹ್ಞಾಂ, ನಿನ್ನನ್ನು ನಾನೆಲ್ಲೋ ನೋಡಿದ್ದೇನೆ. ಆದರೆ ನೀನು ಇಷ್ಟು ದಿನ ಇಲ್ಲಿಗೇಕೆ ಬರಲಿಲ್ಲ?'' ಎಂದು. ಆದಿ ಅಂತ್ಯಗಳಿಲ್ಲದ ತಮ್ಮೀರ್ವರ ಬಾಂಧವ್ಯದ ನೆನಹು ಅವರ ಮಾತುಗಳಲ್ಲಿ! ಅವನು ಪುರೀಕ್ಷೇತ್ರದಲ್ಲಿರುವಷ್ಟು ಕಾಲವೂ ಪ್ರತಿದಿನ ಎರಡು ಸಾರಿ ತಮ್ಮ ಬಳಿಗೆ ಬಂದುಹೋಗುವಂತೆ ಸ್ವಾಮಿ ಬ್ರಹ್ಮಾನಂದರು ಹೇಳಿದರು. ತಮಗಾಗಿ ಇಷ್ಟು ಕಾಲ ಹಂಬಲಿಸಿದ್ದ ಅವನೆದೆಗೆ ತಮ್ಮ ಸಾನ್ನಿಧ್ಯ ಸುಖವನ್ನು ಧಾರಾಕಾರವಾಗಿ ಕರುಣಿಸುವ ತವಕ ಅವರಿಗೆ! ಆ ಯುವಕ ಅತ್ಯಾನಂದದಿಂದ ಅವರ ಆಜ್ಞೆಯನ್ನು ಪಾಲಿಸಿದ. ಪ್ರತಿ ಸಾರಿ ಅವರ ಬಳಿಸಾರಿದಾಗಲೂ ಅವರು ಅವನ ಮೇಲೆ ವಾತ್ಸಲ್ಯದ ಮಧುವನ್ನು ವರ್ಷಿಸುತ್ತಿದ್ದರು. ಸ್ನಾನಯಾತ್ರೆಯ ಶುಭದಿನ ಕಳೆದ ನಂತರ ಆ ಯುವಕ ಪುರೀಕ್ಷೇತ್ರದಿಂದ ತನ್ನ ಹಳ್ಳಿಗೆ ಹಿಂದಿರುಗಿದ.

ಆ ಯುವಕ ತನ್ನ ಮನೆಗೆ ಹಿಂದಿರುಗಿದ್ದು ಅನಿವಾರ್ಯತೆಯಿಂದ ಮಾತ್ರವೇ. ಆದರೆ ಅವನ ಮನದ ತುಂಬೆಲ್ಲ ಸ್ವಾಮಿ ಬ್ರಹ್ಮಾನಂದರ ಮಂಗಳಕರ ಮೂರ್ತಿ, ಅವರ ಮೇರೆಯರಿಯದ ಪ್ರೀತಿ, ಅವರ ಸನ್ನಿಧಿಗೆ ಮತ್ತೆ ತೆರಳುವ ಆರ್ತಿ! ಅವನೆದೆ ಅವಿರತವಾಗಿ ಭಾವಿಸುತ್ತಿತ್ತು, 'ಆಹಾ! ಅವರೆಷ್ಟು ತನ್ನವರು! ತನ್ನ ಸ್ವಜನರಿಗಿಂತಲೂ ತನ್ನ ಸ್ವಂತದವರು! ನಾನು ನನ್ನ ಆತ್ಮಪೂರ್ವಕವಾಗಿ ಅವರನ್ನು ಪ್ರೀತಿಸಬೇಕು' ಎಂದು. ಆ ಭಾವನೆಯ ತೀವ್ರತೆ ಅವನೊಬ್ಬನಿಗೆ ಮಾತ್ರ ಗೊತ್ತು!

ಕೆಲಕಾಲದ ನಂತರ ಆ ಯುವಕ ಎಂ.ಎ. ಅಧ್ಯಯನಕ್ಕಾಗಿ ಕಲ್ಕತ್ತೆಗೆ ಬಂದ. ಈಗ ಅವನು ತನ್ನ ಮನದಾಸೆಯಂತೆ ಸ್ವಾಮಿ ಬ್ರಹ್ಮಾನಂದರನ್ನು ಮತ್ತೆಮತ್ತೆ ಸಂದರ್ಶಿಸಲು ಅವಕಾಶವಾಯಿತು. ಈ ಭೇಟಿಗಳ ಮೂಲಕ ಅವನಿಗೆ ಸ್ವಾಮಿ ಬ್ರಹ್ಮಾನಂದರನ್ನು ಆಶ್ರಯಿಸಿದ್ದ ವಿಶ್ವವಿದ್ಯಾಲಯದ ಹಲವು ವಿದ್ಯಾರ್ಥಿಗಳ ಪರಿಚಯವೂ ಆಯಿತು. ಇವರಲ್ಲಿ ಕೆಲವರಿಗೆ ಸ್ವಾಮಿ ಬ್ರಹ್ಮಾನಂದರು ಮಂತ್ರದೀಕ್ಷೆಯನ್ನೂ ಕರುಣಿಸಿದ್ದರು. ಈ ಸುದ್ದಿ ತಿಳಿದ ಮೇಲೆ ಆ ಯುವಕನಿಗೂ ಅವರಿಂದ ಮಂತ್ರದೀಕ್ಷೆಯನ್ನು ಪಡೆಯುವ ತವಕ! ದಿನ ಕಳೆದಂತೆ ಮಂತ್ರದೀಕ್ಷೆಗಾಗಿ ಅವನೆದೆಯಲ್ಲಿ ಉದಿಸಿದ್ದ ವ್ಯಾಕುಲತೆ ಬಲಿಯಿತು.

ಒಂದು ದಿನ ಬೆಳಿಗ್ಗೆ ಸುಮಾರು ಹತ್ತು ಗಂಟೆಯ ಸಮಯ. ಆ ಯುವಕ ಒಂದು ಹೋಟೆಲಿನಲ್ಲಿ ಬೆಳಗಿನ ಉಪಾಹಾರ ಸೇವಿಸುತ್ತ ಕುಳಿತಿದ್ದ. ಅದೇ ಸಮಯದಲ್ಲಿ ಬೀದಿಯಲ್ಲಿ ಏಕತಾರಾವನ್ನು ನುಡಿಸುತ್ತ ಭಾವಪೂರಿತನಾಗಿ ಹಾಡುತ್ತ ಹೋಗುತ್ತಿದ್ದ ಬಾವುಲ್ ಒಬ್ಬನ ದನಿ ತೇಲಿಬಂತು: 'ಗುರುಕೃಪೆಯಿರದೆ ಭವಸಾಗರತರಣ ಕನಸಿನೊಳಗಿನ ಸ್ವರ್ಣಾಭರಣ!'. ಇದನ್ನು ಕೇಳಿ ಆ ಯುವಕನಲ್ಲಿ ವ್ಯಾಕುಲತೆ ಮೇರೆ ಮೀರಿ ಉಕ್ಕಿ ಹರಿಯಿತು. ತಿಂಡಿ ತಿನ್ನುವುದನ್ನು ಅರ್ಧಕ್ಕೇ ನಿಲ್ಲಿಸಿ ಕಣ್ಣೀರು ಸುರಿಸುತ್ತ ಬಲರಾಮಬಾಬುವಿನ ಮನೆಗೆ ಧಾವಿಸಿದ.

ಸ್ವಾಮಿ ಬ್ರಹ್ಮಾನಂದರು ಬಲರಾಮಬಾಬುವಿನ ಮನೆಯ ಮಹಡಿಯ ಮೇಲಿನ ಕೋಣೆಯೊಂದರಲ್ಲಿ ತಂಗಿದ್ದರು. ಅವರ ಬಳಿಗೆ ಹೋಗಲು ಆ ಯುವಕ ಮಹಡಿಯ ಮೊದಲ ಮೆಟ್ಟಿಲ ಮೇಲೆ ಹೆಜ್ಜೆ ಇಟ್ಟಿದ್ದಾನೆ, ತಲೆಯೆತ್ತಿ ನೋಡಿದರೆ, ಮೇಲಿನ ಮೆಟ್ಟಿಲಲ್ಲಿ ಸ್ವತಃ ಸ್ವಾಮಿ ಬ್ರಹ್ಮಾನಂದರು ನಿಂತಿದ್ದಾರೆ! ಅವರನ್ನು ಕಂಡೊಡನೆ ಅವನ ಭಾವಾವೇಗದ ಕಟ್ಟೆಯೊಡೆಯಿತು. ಕಣ್ಣುಗಳಿಂದ ಅಶ್ರುಪ್ರವಾಹ ಧುಮ್ಮಿಕ್ಕಿತು. ಅವನು ಅವರ ಬಳಿಗೋಡಿ ಅವರ ಪಾದಗಳಿಗೆ ಮಣಿದ. ಸ್ವಾಮಿ ಬ್ರಹ್ಮಾನಂದರು ಅವನ ಬೆನ್ನ ಮೇಲೆ ಮೃದುವಾಗಿ ಕೈಯಾಡಿಸುತ್ತ ವಿಷಯವೇನೆಂದು ವಿಚಾರಿಸಿದರು. ಅವನು ಬಿಕ್ಕುತ್ತಲೇ 'ದೀಕ್ಷೆ' ಎಂದು ತೊದಲಿದಾಗ, ''ಅದಕ್ಕಾಗಿ ಇಷ್ಟು ಚಿಂತಿಸಬೇಕೆ? ನಿನಗೆ ದೀಕ್ಷೆ ದೊರೆಯುತ್ತದೆ''

ಎಂದು ಅಭಯವನ್ನಿತ್ತರು. ಕಾಲಕ್ರಮದಲ್ಲಿ ಅವನಿಗೆ ಮಂತ್ರದೀಕ್ಷೆಯನ್ನು ಅನುಗ್ರಹಿಸಿದರು. ಕೆಲದಿನಗಳ ನಂತರ ಅವನ ಸಾಧನಾ ಮಾರ್ಗದಲ್ಲಿ ಸಂಶಯದ ಬಿರುಗಾಳಿ ಎದ್ದಾಗ ಅವನಿಗೆ ಮಾರ್ಗದರ್ಶನ ಮಾಡಿ, ಆತ್ಮವಿಶ್ವಾಸವನ್ನೂಡಿ ಅವನಿಗೆ ಬೆಂಗಾವಲಾಗಿ ನಿಂತರು.

ಸ್ವಾಮಿ ಬ್ರಹ್ಮಾನಂದರ ಅನುಪಮ ವಾತ್ಸಲ್ಯವನ್ನು ಆ ಯುವಕ ಇಷ್ಟರಮಟ್ಟಿಗೆ ಪಡೆದನಾದರೂ ಅವನ ಮನದೊಳಗಿನ ಆಸೆಯೊಂದು ಪೂರ್ಣಗೊಳ್ಳದೆಯೇ ಉಳಿದುಬಿಟ್ಟಿತ್ತು. ಒಂದೇ ಒಂದು ಸಾರಿ ಸ್ವಾಮಿ ಬ್ರಹ್ಮಾನಂದರು, 'ನೀವೆಲ್ಲ ನನ್ನವರು' ಎಂದು ಬಾಯಿಬಿಟ್ಟು ಹೇಳುವುದಾದರೆ, ತಾನು ಚಿರಕಾಲಕ್ಕೂ ಅವರಿಗೆ ಸೇರಿದವನಾಗಿಯೇ ಉಳಿದುಕೊಳ್ಳುತ್ತೇನೆ ಎನಿಸುತ್ತಿತ್ತು ಅವನಿಗೆ. ಅವರಿಂದ ಆ ಮಾತು ಬಂದೀತೇ ಎಂದು ಅವನ ಹೃದಯ ಕಾದು ಕುಳಿತಿತು. ಒಂದು ರಾತ್ರಿ ಅವನು ಸ್ವಪ್ನದಲ್ಲಿ ಸ್ವಾಮಿ ಬ್ರಹ್ಮಾನಂದರು ತನ್ನ ಬಳಿ ಕುಳಿತು, 'ನೀವೆಲ್ಲ ನನ್ನವರೇ! ಅದನ್ನು ಬಾಯಿಬಿಟ್ಟು ಬೇರೆ ಹೇಳಬೇಕೇ?' ಎಂದು ಹೇಳಿದಂತೆ ಕಂಡ. ನಿದ್ರೆಯಿಂದ ಎದ್ದ ಮೇಲೆ ಅವನಿಗೆ ರೋಮಾಂಚನವಾಯಿತು, ತೃಪ್ತಿಯಾಗಲಿಲ್ಲ! ಎಷ್ಟೇ ಆದರೂ ಅದು ಕನಸಲ್ಲವೆ? ನಿಜಕ್ಕೂ ಸ್ವಾಮಿ ಬ್ರಹ್ಮಾನಂದರು ಸ್ಪಷ್ಟವಾದ ಮಾತುಗಳಲ್ಲಿ ತಾನು ಅವರವನು ಎನ್ನುವುದನ್ನು ದೃಢಪಡಿಸಲಿ ಎನ್ನುವುದು ಅವನ ಅಂತರಾತ್ಮದ ಹಂಬಲ. ಕಾಲ ಕಳೆದಂತೆ ಅವನ ಮನದಲ್ಲಿ ಈ ಸದಿಚ್ಛೆ ಬೃಹದಾಕಾರ ತಾಳಿ ನಿಂತಿತು. ಯಾವಾಗ ಸ್ವಾಮಿ ಬ್ರಹ್ಮಾನಂದರ ದರ್ಶನಕ್ಕಾಗಿ ತೆರಳಿದರೂ, 'ಇಂದು ಅವರು ತನ್ನ ವಾಂಛೆಯನ್ನು ಪೂರೈಸಬಹುದೆ?' ಎಂದು ಅವನೆದೆ ಕಾತರಿಸಿ ಕಂಪಿಸುತ್ತಿತ್ತು. ಇಷ್ಟಾದರೂ ತನ್ನಾಸೆಯ ಕುರಿತು ಅವನು ಎಂದೂ ಅವರ ಬಳಿ ತುಟಿಯೊಡೆದು ಹೇಳಿಕೊಳ್ಳಲಿಲ್ಲ.

ಒಮ್ಮೆ ಶ್ರೀರಾಮಕೃಷ್ಣರ ಮತ್ತೋರ್ವ ಸಂನ್ಯಾಸೀ ಶಿಷ್ಯರಾದ ಸ್ವಾಮಿ ಅಖಂಡಾನಂದರಿಗೆ ಮಲೇರಿಯಾ ಜ್ವರ ತಗುಲಿಕೊಂಡಿತು. ವಿಷಯ ತಿಳಿದ ಸ್ವಾಮಿ ಬ್ರಹ್ಮಾನಂದರು ಸೂಕ್ತ ಚಿಕಿತ್ಸೆ ಮತ್ತು ಪಥ್ಯದ ಸುವ್ಯವಸ್ಥೆಗಾಗಿ ಅವರನ್ನು ಬಲರಾಮ ಬೋಸ್‌ನ ಮನೆಗೆ ಕರೆತಂದರು. ಎಂದಿನಂತೆ ಆ ಯುವಕ ತನ್ನ ಗೆಳೆಯನೊಬ್ಬನೊಡನೆ ಸ್ವಾಮಿ ಬ್ರಹ್ಮಾನಂದರ ಸತ್ಸಂಗಕ್ಕೆಂದು ಅಲ್ಲಿಗೆ ಬಂದ. ಅಲ್ಲಿ ಜ್ವರದಿಂದ ಬಳಲುತ್ತಿದ್ದ ಸ್ವಾಮಿ ಅಖಂಡಾನಂದರನ್ನು ಕಂಡು ಸಹಜವಾಗಿಯೇ ಅವರ ಸೇವೆಗೆ ಮುಂದಾದ. ಅವನು ಈ ಮೊದಲೇ ಸ್ವಾಮಿ ಅಖಂಡಾನಂದರನ್ನು ಸಾರ್‌ಗಾಛಿಯ ಆಶ್ರಮದಲ್ಲಿ ಒಮ್ಮೆ ಭೇಟಿಯಾಗಿದ್ದ. ಈ ವಿಷಯವನ್ನು ಅವನು ಉಲ್ಲೇಖಿಸಿದಾಗ, ಅಖಂಡಾನಂದರು ಬಹಳ ಸಂತೋಷಪಟ್ಟು ಇನ್ನಷ್ಟು ಮುಕ್ತವಾಗಿ ಅವನೊಡನೆ ಮಾತುಕತೆ ಆಡಲಾರಂಭಿಸಿದರು. ಹೀಗೆ ಸಂಭಾಷಿಸುತ್ತಿರುವಾಗ ಅವರು ಸ್ವಾಮಿ ಬ್ರಹ್ಮಾನಂದರನ್ನು ಕುರಿತು ವಿಸ್ಮಯಕರ ವಿಷಯವೊಂದನ್ನು ವಿವರವಾಗಿ ಬಣ್ಣಿಸಿದರು. ಆ ಸಮಯದಲ್ಲಿ ಸ್ವಾಮಿ ಬ್ರಹ್ಮಾನಂದರು ಕೆಲ ಹೊತ್ತು ಹಾಲ್‌ನಲ್ಲಿ, ಮತ್ತೆ ಕೆಲವು ನಿಮಿಷಗಳ ಕಾಲ ಪಕ್ಕದಲ್ಲಿದ್ದ ವೆರಾಂಡಾದಲ್ಲಿ ಶತಪಥ ನಡೆದಾಡುತ್ತಿದ್ದರು. ಸಹಜವಾಗಿಯೇ ಇವರ ಮಾತು ಸಾದ್ಯಂತವಾಗಿ ಅವರ ಕಿವಿಗೆ ಬಿತ್ತು. ಸ್ವಾಮಿ ಬ್ರಹ್ಮಾನಂದರು ಇದ್ದಕ್ಕಿದ್ದಂತೆ ನಡೆಯುವುದನ್ನು ನಿಲ್ಲಿಸಿ ಆ ಯುವಕನ ಸಂಬಂಧವಾಗಿ ಸ್ವಾಮಿ ಅಖಂಡಾನಂದರನ್ನು ಕೇಳಿದರು: ಇವನ ಪರಿಚಯ ನಿನಗೆ ಇಷ್ಟರ ಮಟ್ಟಿಗೆ ಆದದ್ದು ಹೇಗೆ? ಎಂದು. ಅದಕ್ಕೆ ಸ್ವಾಮಿ ಅಖಂಡಾನಂದರು ತಮಾಷೆಯ ದನಿಯಲ್ಲಿ ಹೇಳಿದರು: ಓ! ನನಗೆ ಇವನ ಪರಿಚಯ ಬಹಳ ದಿನಗಳದ್ದು. ಈಗಂತೂ ಇವನು ನನ್ನವನೇ ಆಗಿಬಿಟ್ಟಿದ್ದಾನೆ ಎಂದು. ಅಖಂಡಾನಂದರ ಈ ಮಾತುಗಳನ್ನು ಕೇಳಿದ ಕೂಡಲೇ ಸ್ವಾಮಿ ಬ್ರಹ್ಮಾನಂದರು ಅತ್ಯಂತ ಗಂಭೀರ ಮುಖಮುದ್ರೆಯನ್ನು ತಳೆದು ಪಕ್ಕದಲ್ಲಿದ್ದ ಕೋಣೆಯೊಳಗೆ ಹೊರಟುಹೋದರು. ಆ ಯುವಕನೂ ಸ್ವಲ್ಪ ಅಪ್ರತಿಭನಾದ. ಅಲ್ಲಿಯವರೆಗೆ ಸಹಜವಾಗಿದ್ದ ಅವರು ಇದ್ದಕ್ಕಿದ್ದಂತೆ ಗಂಭೀರರಾದದ್ದು ಏಕೆ? ತನ್ನೀ ಶಿಶು ತನ್ನ ಸೋದರನಿಗೆ ಸೇರಿದವನಾಗುವುದನ್ನು ಅವರ ಮಾತೃಹೃದಯ ಸಹಿಸದಾಯಿತೇನು? ಮಾಯಾತೀತರಾದ ಆ ಮಹಾಸಂನ್ಯಾಸಿಯ ಅಂತರ್ಯದಲ್ಲಿ ಈಗ ಆ ಯುವಕನ ಕುರಿತು ಅಲೌಕಿಕ ಮಮಕಾರ ಜಾಗೃತವಾಯಿತೇನು?

ಕೆಲ ನಿಮಿಷಗಳು ಕಳೆದವು. ಈಗ ಸ್ವಾಮಿ ಬ್ರಹ್ಮಾನಂದರು ಪುಟ್ಟ ಹುಡುಗನೊಬ್ಬನ ಮೂಲಕ ಆ ಯುವಕನಿಗೆ ಕರೆ ಕಳುಹಿಸಿದರು. ಆ ಯುವಕ ತಕ್ಷಣ ಅವರ ಕೋಣೆಯನ್ನು ಪ್ರವೇಶಿಸಿದ. ಅವನು ಬಂದು ತಮ್ಮ ಸಮ್ಮುಖದಲ್ಲಿ ನಿಂತ ಕೂಡಲೇ ಸ್ವಾಮಿ ಬ್ರಹ್ಮಾನಂದರು ಅವನನ್ನು ಕೇಳಿದರು: ''ಅಲ್ಲ, ನೀನು ಅಷ್ಟೊಂದು ಚಿಂತಿಸುವುದೇಕೆ? ಇಲ್ಲಿಗೆ ಬಂದ ಮೇಲೆ **ನೀವೆಲ್ಲ ನನಗೆ ಸೇರಿದವರೇ**. ಅರ್ಥವಾಯಿತೆ? **ನೀವೆಲ್ಲ ನನ್ನವರು**.'' ಸ್ವಾಮಿ ಬ್ರಹ್ಮಾನಂದರ ಮಮತೆಯ ತೀವ್ರತೆಗೆ ಆ ಯುವಕ ಕರಗಿಹೋದ. ಅವರು ಮುಕ್ತಿಯನ್ನೇ ಕರುಣಿಸಿದ್ದರೂ ಬಹುಶಃ ಅವನಿಗೆ ಇಷ್ಟು ಆನಂದವಾಗುತ್ತಿರಲಿಲ್ಲ! ತಮ್ಮೀರ್ವರ ಸಂಬಂಧಕ್ಕೆ ಈ ಅಲೌಕಿಕ ಮಮತೆ ತಂದಿತ್ತ ನಿರ್ಣಾಯಕತೆಯನ್ನು, ಆಪ್ತತೆಯನ್ನು ಮತ್ತು ಆಧಿಕಾರಿಕತೆಯನ್ನು ಸರಿಗಟ್ಟಬಲ್ಲ ನಿಧಿ ಮತ್ತೊಂದಿರಲು ಸಾಧ್ಯವೆ? ಭಕ್ತಿ, ಕೃತಜ್ಞತೆ ಮತ್ತು ಸಂತಸಗಳು ಬೆರೆತ ಕಣ್ಣೀರು ಅವನ ಕಪೋಲದ ಮೇಲೆ ಅವಿರತವಾಗಿ ತೊಟ್ಟಿಕ್ಕತೊಡಗಿತು. ಅಂತರ್ಯಾಮಿಯೂ, ತ್ರಿಕಾಲಜ್ಞರೂ ಈಶ್ವರಕೋಟಿಯೂ ಆದ ತನ್ನ ಹೃದಯದ ಅಧಿದೇವತೆ ಮತ್ತು ಗುರು ಸ್ವಾಮಿ ಬ್ರಹ್ಮಾನಂದರಿಗೆ ಅವನು ಮತ್ತೆಮತ್ತೆ ಪ್ರಣಾಮ ಸಲ್ಲಿಸಿದ. ಅಂತೂ ಸ್ವಾಮಿ ಅಖಂಡಾನಂದರ ಪರಿಹಾಸ ಸ್ವಾಮಿ ಬ್ರಹ್ಮಾನಂದರ ಮಮತೆಯ ಮೇಲಿನ ಮರೆಯನ್ನು ಬದಿಗೆ ಸರಿಸಿತ್ತು! ಮುಂದೆ ನಿಜಕ್ಕೂ ಆ ಯುವಕ ತ್ರಿಕರಣಪೂರ್ವಕವಾಗಿ ತನ್ನನ್ನು ತಾನು ಸ್ವಾಮಿ ಬ್ರಹ್ಮಾನಂದರಿಗೆ ಸಮರ್ಪಿಸಿಕೊಂಡು ರಾಮಕೃಷ್ಣ ಮಹಾಸಂಘಕ್ಕೆ ಸೇರಿ ಗಣನೀಯ ಸೇವೆ ಸಲ್ಲಿಸಿದ. ಅವನ ಸಂನ್ಯಾಸನಾಮ 'ಸ್ವಾಮಿ ತೇಜಸಾನಂದ'!

ಅಪರೇಶಚಂದ್ರ ಮುಖ್ಯೋಪಾಧ್ಯಾಯ ಸದೃಢ ದೇಹಮನಗಳುಳ್ಳ ಉತ್ಸಾಹಶಾಲಿ ಯುವಕ. ಸ್ವಭಾವತಃ ಭಾವಜೀವಿಯಾಗಿದ್ದ

ಅವನು ಶಾಲೆಯಲ್ಲಿ ಓದುವಾಗಲೇ ನಾಟಕಗಳ ವರ್ಣಮಯ ಲೋಕದತ್ತ ಆಕರ್ಷಿತನಾದ. ಕ್ರಮೇಣ ಶಾಲೆಯ ವ್ಯಾಸಂಗಕ್ಕಿಂತ ನಾಟಕದ ಸೆಳೆತ ಹೆಚ್ಚಾಯಿತು. ಇನ್ನು ಅವನು ಎಂಟ್ರೆನ್ಸ್ ಪರೀಕ್ಷೆಯಲ್ಲಿ ಅನುತ್ತೀರ್ಣನಾದುದರಲ್ಲಿ ಅಚ್ಚರಿಯೇನಿದೆ? ಅವನ ಗೆಳೆಯ ಮಣೀಂದ್ರಕೃಷ್ಣ ಗುಪ್ತ ಎನ್ನುವವನು ಅಪರೇಶನನ್ನು ರಂಗಭೂಮಿಗೆ ಪರಿಚಯಿಸಿದ.

ಇದೇ ಮಣೀಂದ್ರನು ಅಪರೇಶನನ್ನು ಶ್ರೀರಾಮಕೃಷ್ಣ ಮಠದ ಸಂಪರ್ಕಕ್ಕೂ ಕರೆತಂದ. ಆಗ ರಾಮಕೃಷ್ಣ ಮಠ ಆಲಂಬಜಾರಿನಲ್ಲಿತ್ತು. ಸ್ವಾಮಿ ಬ್ರಹ್ಮಾನಂದರೇ ಮೊದಲಾದ ಶ್ರೀರಾಮಕೃಷ್ಣರ ಸಂನ್ಯಾಸೀ ಶಿಷ್ಯರ ಅಸೀಮ ಪಾವಿತ್ರ್ಯ, ತಪೋಮಯ ಜೀವನ ಮತ್ತು ಅಪೂರ್ವ ಪ್ರೇಮಗಳು ಅಪರೇಶನನ್ನು ಮಂತ್ರಮುಗ್ಧಗೊಳಿಸಿದವು. ಈ ಮಹಾತ್ಮರೆಲ್ಲರ ಸಾನ್ನಿಧ್ಯದಲ್ಲಿ ಅವನು ಅನಿರ್ವಚನೀಯ ಆನಂದದಿಂದ ಕಾಲ ಕಳೆಯತೊಡಗಿದ. ಆಗಾಗ ಅವನು ದಕ್ಷಿಣೇಶ್ವರಕ್ಕೂ ಭೇಟಿ ನೀಡುತ್ತಿದ್ದ. ದಕ್ಷಿಣೇಶ್ವರವಂತೂ ಧರೆಯ ಮೇಲಿನ ವೈಕುಂಠ! ಮೇಲೆ ಅನಂತ ನೀಲಾಕಾಶ, ಎದುರಿನಲ್ಲಿ ಬೆಳದಿಂಗಳನ್ನು ತನ್ನೊಳಗೆ ಕರಗಿಸಿಕೊಂಡು ಕಲಕಲನೆ ಪ್ರವಹಿಸುವ ಭಾಗೀರಥಿ, ಸುತ್ತಮುತ್ತ ಅರಳಿದ ಪುಷ್ಪಗಳು ಸೂಸುತ್ತಿದ್ದ ಪರಿಮಳ– ಇವೆಲ್ಲ ಅಪರೇಶನ ಮನವನ್ನು ಉಚ್ಚ ಸ್ತರಕ್ಕೇರಿಸುತ್ತಿದ್ದವು.

ಇದೇ ಸಮಯದಲ್ಲಿ ಶಿಕಾಗೋದ ಸರ್ವಧರ್ಮ ಸಮ್ಮೇಳನದಲ್ಲಿ ದಿಗ್ವಿಜಯವನ್ನು ಸಾಧಿಸಿದ ಸ್ವಾಮಿ ವಿವೇಕಾನಂದರು ಕಲ್ಕತ್ತೆಗೆ ಹಿಂದಿರುಗಿದರು. ಅವರಿಗೆ ರಿಪ್ಪನ್ ಕಾಲೇಜಿನಲ್ಲಿ ಭವ್ಯ ಸ್ವಾಗತ ಸಮಾರಂಭವೊಂದನ್ನು ಏರ್ಪಡಿಸಲಾಗಿತ್ತು. ಅವರಿಗೆ ಸ್ವಾಗತ ಕೋರಲು ದಾರಿಯುದ್ದಕ್ಕೂ ಸಹಸ್ರಾರು ಸಂಖ್ಯೆಯಲ್ಲಿ ಜನ ನೆರೆದಿದ್ದರು. ಸ್ವಾಮೀಜಿಯವರು ಕುಳಿತಿದ್ದ ಸಾರೋಟಿನಿಂದ ಕುದುರೆಗಳನ್ನು ಬಿಡಿಸಿ ರಿಪ್ಪನ್ ಕಾಲೇಜಿನವರೆಗೆ ಗಾಡಿಯನ್ನು ಸ್ವತಃ ಎಳೆದು ತಂದ ಉತ್ಸಾಹೀ ಯುವಕರಲ್ಲಿ ಅಪರೇಶನೂ ಒಬ್ಬ! ಸ್ವಾಮೀಜಿಯವರ ದರ್ಶನ ಮಾಡಲು ಉಂಟಾದ ನೂಕುನುಗ್ಗಲಿನಲ್ಲಿ ಅಪರೇಶ ನೆಲಕ್ಕುರುಳಿ ಜನರ ಕಾಲ್ತುಳಿತಕ್ಕೆ ಸಿಲುಕಿದ. ಸುತ್ತಲಿದ್ದವರು ಕಷ್ಟಪಟ್ಟು ಅವನನ್ನು ಮೇಲೆತ್ತದೆ ಹೋಗಿದ್ದರೆ ಅಂದು ಅವನು ಬದುಕುಳಿಯುತ್ತಲೇ ಇರಲಿಲ್ಲ. ಅವನು ಪ್ರಾಣಾಪಾಯದಿಂದ ಪಾರಾದರೂ ಅಂದು ತಲೆದೋರಿದ ನರಗಳ ನೋವು ಜೀವನದ ಕೊನೆಯವರೆಗೆ ಅವನನ್ನು ಕಾಡಿತು.

ಅಪರೇಶ ರಾಮಕೃಷ್ಣ ಮಹಾಸಂಘದೊಡನೆ ಇಷ್ಟು ಆಳವಾದ ಸಂಪರ್ಕ ಹೊಂದಿದ್ದ ಎನ್ನುವುದೇನೋ ನಿಜವೇ. ಆದರೆ ನಾಟಕದ ಗೀಳು ಮಾತ್ರ ಅವನನ್ನು ಬಿಡಲಿಲ್ಲ. ಒಮ್ಮೆ ತನ್ನ ಸೇವೆಯಿಂದ ಸ್ವಾಮಿ ಯೋಗಾನಂದರನ್ನು ಸಂತೋಷಪಡಿಸಿದ ಅಪರೇಶ ಅವರ ಬಳಿ ವರವೊಂದನ್ನು ಯಾಚಿಸಿದ: ''ನಾನೊಬ್ಬ ದೊಡ್ಡ ನಟನಾಗುವಂತಾಗಲಿ'' ಎಂದು. ಅವನ ಆಸೆ ಫಲಿಸಿತು. ಅವನು ಓರ್ವ ಶ್ರೇಷ್ಠ ನಟನಾಗಿ ರೂಪುಗೊಂಡು ಸಾಕಷ್ಟು ಜನಪ್ರಿಯತೆಯನ್ನು ಗಳಿಸಿದ. ಜೊತೆಗೆ ಅತ್ಯಂತ ಸೃಜನಶೀಲ ನಾಟಕಕಾರನಾಗಿಯೂ ನಿರ್ದೇಶಕನಾಗಿಯೂ ಅವನು ಗಣ್ಯವ್ಯಕ್ತಿಗಳ ಪ್ರಶಂಸೆಗೆ ಪಾತ್ರನಾದ.

ಕಾಲಕ್ರಮದಲ್ಲಿ ಅಪರೇಶ ರಂಗಭೂಮಿಯೊಳಗೆ ಕಳೆದುಹೋದ. ಮಠದಿಂದ, ದಕ್ಷಿಣೇಶ್ವರದಿಂದ, ಪೂಜ್ಯ ಸಂನ್ಯಾಸಿಗಳ ಪಾವನಕರ ಸಂಸರ್ಗದಿಂದ ದೂರ ಸರಿಯಲು ಅವನಿಗೆ ಹೆಚ್ಚು ಕಾಲ ಬೇಕಾಗಲಿಲ್ಲ. ಹುಚ್ಚು ಧೈರ್ಯದೊಂದಿಗೆ ಅವನು ಪ್ರಾಪಂಚಿಕತೆಯ ಕತ್ತಲ ಗವಿಯೊಳಗೆ ತಾನಾಗಿ ಇಳಿದಿದ್ದ. ಕ್ರಮೇಣ ನೈತಿಕ ಅಧಃಪತನ ಹೊಂದುವುದು ಅನಿವಾರ್ಯವಾಯಿತು. ಪ್ರಾಪಂಚಿಕತೆ ಒಂದು ವಿಷಮ ರೋಗ. ಅದನ್ನು ತಾನಾಗಿ ಬರಮಾಡಿಕೊಂಡ ಮೇಲೆ ನೆಮ್ಮದಿಯಿಂದಿರಲು ಹೇಗೆ ಸಾಧ್ಯ? ಅಪರೇಶನ ಆಂತರ್ಯ ಅಶಾಂತಿಯ ಮಡುವಾಯಿತು. ಪಶ್ಚಾತ್ತಾಪ, ಲಜ್ಜೆಗಳಿಂದ ಕುಗ್ಗಿಹೋದ ಅವನು ಮಠದ ಕಡೆ ತಿರುಗಿ ನೋಡುವುದನ್ನೂ ಬಿಟ್ಟುಬಿಟ್ಟ. ಉತ್ಸವಗಳು ಜರುಗಿದಾಗ ಆರು ತಿಂಗಳಿಗೊಮ್ಮೆಯೋ ವರ್ಷಕ್ಕೊಮ್ಮೆಯೋ ಬೇಲೂರು ಮಠಕ್ಕೆ ಕಳ್ಳನಂತೆ ಗುಟ್ಟಾಗಿ ಹೋಗಿ, ಉತ್ಸವವನ್ನು ದೂರದಿಂದ ವೀಕ್ಷಿಸಿ ಮನೆಗೆ ಬಂದುಬಿಡುತ್ತಿದ್ದ. ತನಗೆ ಪರಮ ಆತ್ಮೀಯರಾದವರಿಂದ ಬಹುದೂರ ಅಪರಿಚಿತನಂತೆ ನಿಲ್ಲಬೇಕಾಗಿ ಬಂದ ಅವನ ವೇದನೆ ಎಷ್ಟು ಅಗಾಧವಾದದ್ದಾಗಿರಬೇಕು! 'ಅನುಕೂಲಕರ ಹವೆಯಲ್ಲಿ ಆಗಸಕ್ಕೇರಿ ಪಟಪಟನೆ ಹಾರುತ್ತಿದ್ದ ಗಾಳಿಪಟ ಇದ್ದಕ್ಕಿದ್ದಂತೆ ಒದ್ದೆಮುದ್ದೆಯಾಗಿ ನೆಲಕ್ಕೆ ಬಿದ್ದ ಹಾಗಿದೆ ತನ್ನ ಜೀವನ' ಎನಿಸಿಬಿಟ್ಟಿದೆ ಅವನಿಗೆ!

ಹೀಗೇ ಹದಿನಾಲ್ಕು ವರ್ಷಗಳು ಕಳೆದವು. ಯಾರೆಷ್ಟೇ ಹೇಳಿದರೂ ಅಗ್ನಿಸದೃಶ ಪಾವಿತ್ರ್ಯವುಳ್ಳ ಸಂನ್ಯಾಸಿಗಳ ಬಳಿ ತೆರಳಲು ಅಪರೇಶ ಮನ ಮಾಡಲೇ ಇಲ್ಲ. ಒಂದು ದಿನ ಅವನ ಸ್ನೇಹಿತ ಶ್ರೀಶಚಂದ್ರ ಮತಿಲಾಲ ಅವನನ್ನು ಒತ್ತಾಯಪೂರ್ವಕವಾಗಿ ಉದ್ಬೋಧನಕ್ಕೆ ಕರೆದೊಯ್ದ. ಅಲ್ಲಿ ಅಪರೇಶ ಬಹುಕಾಲದ ನಂತರ ಸ್ವಾಮಿ ಶಾರದಾನಂದರನ್ನು ಸಂಧಿಸಿ ಅವರ ಪಾದಧೂಳಿಯನ್ನು ಸ್ವೀಕರಿಸಿದ. ಆ ಸಮಯದಲ್ಲಿ ಅವನು ಭಗವದ್ರಾಮಾನುಜಾಚಾರ್ಯರ ಜೀವನವನ್ನು ಕುರಿತ ನಾಟಕವೊಂದನ್ನು ರಚಿಸುತ್ತಿದ್ದ. ಈ ನಾಟಕದ ರಚನೆಯ ಕುರಿತು ಅಪಾರ ಕಾಳಜಿ ತಳೆದಿದ್ದ ಮತಿಲಾಲ ಪ್ರತಿದಿನ ಅಪರೇಶನನ್ನು 'ಏನು? ಎಲ್ಲಿಯವರೆಗೆ ಬಂತು?' ಎಂದು ಪ್ರಶ್ನಿಸಿ, ದಬಾಯಿಸಿ, ಸಾಲಗಾರನಂತೆ ಕಾಡಿ, ಅವನ ಬರವಣಿಗೆ ನಿಯಮಿತವಾಗಿ ಮುಂದುವರಿಯುವಂತೆ ನೋಡಿಕೊಳ್ಳುತ್ತಿದ್ದ. ನಾಟಕದ ಪ್ರತಿ ಅಂಕದ ರಚನೆ ಪೂರ್ಣಗೊಂಡ ನಂತರ ಸ್ವಾಮಿ ಶಾರದಾನಂದರ ಮುಂದೆ ಅಪರೇಶ ಅದನ್ನು ಓದಿ ತೋರಿಸುತ್ತಿದ್ದ. ಅವರು ಆ ವಾಚನವನ್ನು ಆಸಕ್ತಿಯಿಂದ ಆಲಿಸಿ ಅವನನ್ನು ಮನಃಪೂರ್ವಕವಾಗಿ ಆಶೀರ್ವದಿಸಿ ಪ್ರೋತ್ಸಾಹಿಸುತ್ತಿದ್ದರು.

ಅಪರೇಶನು ರಾಮಾನುಜಾಚಾರ್ಯರನ್ನು ಕುರಿತು ನಾಟಕವೊಂದನ್ನು ರಚಿಸುತ್ತಿರುವ ವಿಷಯ ಕ್ರಮೇಣ ಸ್ವಾಮಿ ಬ್ರಹ್ಮಾನಂದರನ್ನೂ ತಲುಪಿತು. ಇಂಥ ಉತ್ತಮ ಕಾರ್ಯವೊಂದು ನಡೆಯು

ತ್ತಿದೆ ಎನ್ನುವುದನ್ನು ಕೇಳಿ ಅವರು ಬಹಳ ಸಂತೋಷಪಟ್ಟರು. ನಂತರ ಅವರು ಕೇಳಿದರು: ''ನಾಟಕವನ್ನು ರಚಿಸುತ್ತಿರುವವರು ಯಾರು? **ನಮ್ಮ ಅಪರೇಶನೆ?**'' ಎಂದು. ಈ ವಿಷಯವನ್ನು ಗೆಳೆಯನೊಬ್ಬ ಅಪರೇಶನಿಗೆ ತಿಳಿಸಿದ. 'ನಮ್ಮ ಅಪರೇಶನೆ?'– ಬಹುಕಾಲದಿಂದ ಸಡಿಲಗೊಂಡು ತುಕ್ಕುಹಿಡಿದು ಹೋಗಿದ್ದ ಅಪರೇಶನ ಹೃದಯದ ತಂತಿಗಳು ಈ ಮಾತನ್ನು ಕೇಳಿದೊಡನೆ ಹೊಸ ಕಳೆ ತಳೆದು ಶ್ರುತಿಗೂಡಿ ಝೇಂಕರಿಸಿದವು! ಇದ್ದಕ್ಕಿದ್ದಂತೆ ಪರಕೀಯನಾಗಿ ಹೋದವನನ್ನು, ಪತಿತನಾದವನನ್ನು ಇಷ್ಟು ಆಪ್ತವಾಗಿ ತಮ್ಮವನನ್ನಾಗಿ ಮಾಡಿಕೊಳ್ಳಲು ಸ್ವಾಮಿ ಬ್ರಹ್ಮಾನಂದರನ್ನು ಹೊರತುಪಡಿಸಿ ಇನ್ನಾರಿಗೆ ತಾನೆ ಸಾಧ್ಯ? ಈ ಭಾವನೆ ಮೂಡುತ್ತಲೇ ಅಪರೇಶನನ್ನು ಹಲವು ವರ್ಷಗಳಿಂದ ಆವರಿಸಿಕೊಂಡಿದ್ದ ನಿರ್ವಿಣ್ಣತೆಯ ಕಾಳಿಮೆ ತೊಡೆದುಹೋಯಿತು. ಸ್ವಾಮಿ ಬ್ರಹ್ಮಾನಂದರ ಆತ್ಮೀಯತೆಯ ಒಂದು ಅಭಿವ್ಯಕ್ತಿ ಅವನ ಹದಿನಾಲ್ಕು ವರ್ಷಗಳ ಯಾತನಾಮಯ ಅಜ್ಞಾತವಾಸವನ್ನು ಹಠಾತ್ತನೆ ಕೊನೆಗಾಣಿಸಿತ್ತು.

ಈಗ ಅಪರೇಶ ನಾಟಕದ ಪುಸ್ತಕವನ್ನು ತೆಗೆದುಕೊಂಡು ಸ್ವಾಮಿ ಬ್ರಹ್ಮಾನಂದರ ಆಶೀರ್ವಾದ ಪಡೆಯಲು ಹೊರಟ. ಅವರು ಆಗ ಬಲರಾಮನ ಮನೆಯಲ್ಲಿದ್ದರು. ಅಪರೇಶನ ಮನದಲ್ಲಿ ಅಪರಾಧ ಪ್ರಜ್ಞೆ ಇನ್ನೂ ಇಣುಕುತ್ತಲೇ ಇತ್ತು. ಆದರೆ ಅವನನ್ನು ಕಂಡೊಡನೆ ಸ್ವಾಮಿ ಬ್ರಹ್ಮಾನಂದರು ತುಂಬು ವಾತ್ಸಲ್ಯದಿಂದ ಆಶೀರ್ವಾದದ ಭಂಡಾರವನ್ನೇ ಅವನ ಮಡಿಲಿಗೆ ಸುರಿದರು! ಅವನು ರಂಗಭೂಮಿಯ ಆಕರ್ಷಣೆಗೆ ಸಿಲುಕಿ ಇಷ್ಟು ಕಾಲ ತಮ್ಮನ್ನು ಮರೆತ ಕುರಿತು, ಅನೀತಿಯ ಮಾರ್ಗವನ್ನು ಹಿಡಿದುದರ ಕುರಿತು ಅವರು ಚಕಾರವೆತ್ತಲಿಲ್ಲ. ಸುಮ್ಮನೆ ಅವನತ್ತ ಪ್ರೀತಿಸುಧೆಯನ್ನು ಹರಿಸಿದರು. ಅವನು ರಚಿಸಿದ್ದ ನಾಟಕವನ್ನು ವಿವರವಾಗಿ ಓದಿಸಿ ಕೇಳಿದರು. ಕೆಲಕೆಲವು ಸ್ಥಾನಗಳಲ್ಲಿ ವಾಚನವನ್ನು ನಿಲ್ಲಿಸಿ ತಮ್ಮ ಸಂತಸವನ್ನು ಹೃತ್ಪೂರ್ವಕವಾಗಿ ವ್ಯಕ್ತಪಡಿಸಿದರು. ಆ ನಾಟಕವನ್ನು ಕುರಿತು ಅವರ ಆನಂದ, ಉತ್ಸಾಹಗಳಿಗೆ ಪಾರವೇ ಇಲ್ಲ! ನಾಟಕದ ಅಂಗವಾಗಿ ರಚಿಸಲ್ಪಟ್ಟಿದ್ದ ಗೀತೆಗಳಿಗೆ ಸ್ವರಸಂಯೋಜನೆ ಮಾಡಿಸಲು ಆ ಸಮಯದಲ್ಲಿ ಮುರ್ಶಿದಾಬಾದಿನಲ್ಲಿದ್ದ ತಮ್ಮ ಶಿಷ್ಯರೂ ಉತ್ತಮ ಸಂಗೀತಜ್ಞರೂ ಆದ ಸ್ವಾಮಿ ಅಂಬಿಕಾನಂದರಿಗೆ ಟೆಲಿಗ್ರಾಂ ಕಳಿಸಿದರು. ರಾಜಾ ಮಹಾರಾಜರ ಇಚ್ಛೆಯಂತೆ ನಾಟಕದಲ್ಲಿ ರಾಮನಾಮದ ಹಾಡನ್ನು ಸೇರಿಸಲಾಯಿತು.

ಕೊನೆಗೆ ಆ ನಾಟಕವನ್ನು ವೇದಿಕೆಯ ಮೇಲೆ ಪ್ರಸ್ತುತಪಡಿಸುವ ದಿನವೂ ಬಂತು. ಅಂದು ಸ್ವಾಮಿ ಬ್ರಹ್ಮಾನಂದರೂ ಪ್ರೇಕ್ಷಕ ವರ್ಗದಲ್ಲಿ ಕುಳಿತು ನಾಟಕವನ್ನು ಸಾದ್ಯಂತವಾಗಿ ವೀಕ್ಷಿಸಿದರು. 'ಮುಕ್ತಿಯ ಸುಖ ನನಗಿಲ್ಲದಿದ್ದರೂ ಸರಿಯೆ; ಆದರೆ ಇತರರೆಲ್ಲರಿಗೂ ಮುಕ್ತಿ ದೊರೆಯಲಿ' ಎನ್ನುವ ಉದಾರ ದೃಷ್ಟಿಯಿಂದ ಭಗವದ್ರಾಮಾನುಜರು ತಮ್ಮ ಗುರು ತಮಗೆ ರಹಸ್ಯವಾಗಿ ನೀಡಿದ ಮಂತ್ರವನ್ನು ದೇವಾಲಯದ ಮೇಲ್ಭಾಗದಲ್ಲಿ ನಿಂತು ಗಟ್ಟಿಯಾಗಿ ಘೋಷಿಸುವ ದೃಶ್ಯವಂತೂ ಸ್ವಾಮಿ ಬ್ರಹ್ಮಾನಂದರ ಹೃದಯವನ್ನು ಸ್ಪರ್ಶಿಸಿತು. ಅಲ್ಲಿಯವರೆಗೆ ಕೆಲವೇ ಕೆಲವು ಯೋಗ್ಯ ವ್ಯಕ್ತಿಗಳಿಗೆ ಮಾತ್ರ ಮಂತ್ರದೀಕ್ಷೆಯನ್ನು ಅನುಗ್ರಹಿಸುತ್ತಿದ್ದ ಸ್ವಾಮಿ ಬ್ರಹ್ಮಾನಂದರು ಈ ನಾಟಕವನ್ನು ವೀಕ್ಷಿಸಿದಂದಿನಿಂದ ಮುಕ್ತಹಸ್ತರಾಗಿ ಭಗವನ್ನಾಮವನ್ನು ವಿತರಿಸತೊಡಗಿದರು. ಸ್ವಾಮಿ ಬ್ರಹ್ಮಾನಂದರು ತಮ್ಮ ಅದ್ಭುತ ಗುರುಶಕ್ತಿಯನ್ನು ಮತ್ತು ಅಮಿತ ಔದಾರ್ಯವನ್ನು ಅನಾವರಣಗೊಳಿಸಲು ತಮ್ಮವನೇ ಆದ ಅಪರೇಶ ರಚಿಸಿ ನಟಿಸಿದ ಈ ನಾಟಕವನ್ನು ಕೃಪೆಯಿಟ್ಟು ನಿಮಿತ್ತ ವಾಗಿಸಿಕೊಂಡರು ಎಂದರೆ ಸರಿಯಾದೀತು! ಈ ನಾಟಕ ಪ್ರದರ್ಶನದ ನಂತರ ಕೆಲ ದಿನಗಳಲ್ಲೇ ಅಪರೇಶನಿಗೂ ಸ್ವಾಮಿ ಬ್ರಹ್ಮಾನಂದರು ಮಂತ್ರದೀಕ್ಷೆಯನ್ನು ಅನುಗ್ರಹಿಸಿದರು. ಅಪರೇಶ ಮುಂದೆ ರಾಮಕೃಷ್ಣ ಮಹಾಸಂಘದ ಅತ್ಯಂತ ನಿಷ್ಠಾವಂತ ಭಕ್ತನಾದ.

ಸ್ವಾಮಿ ಬ್ರಹ್ಮಾನಂದರು ವ್ಯಕ್ತಿಯೊಬ್ಬನಿಗೆ 'ನೀನು ನನ್ನವನು' ಎಂದರೆ ಆಗುವ ಅದ್ಭುತಗಳು ಇಂಥವು! ಅವರ ಆ ಮಂತ್ರಸದೃಶ ನುಡಿ, ಅತಿ ಕಠಿಣವಾದ ಅಸಿಧಾರಾವ್ರತವನ್ನು ಕೈಗೊಂಡು ಗೆಲ್ಲುವ ಆತ್ಮವಿಶ್ವಾಸವನ್ನು ಒಂದೆಡೆ ರೂಢಿಸಿದರೆ, ಅಧಃಪತನ ಹೊಂದಿ ಅಪರಾಧಿ ಪ್ರಜ್ಞೆಯಿಂದ ಕಮರಿಹೋಗಿದ್ದ ಜೀವದಲ್ಲಿ ನವಚೈತನ್ಯವನ್ನು ಮತ್ತೊಂದೆಡೆ ಮೂಡಿಸಿತು! ಅವರ ಆ ಮಾತು ಇನ್ನೆಷ್ಟು ಜನರ ಜೀವನದಲ್ಲಿ ಶ್ರದ್ಧೆಯನ್ನು ಮೂಡಿಸಿತೋ, ಇನ್ನೆಷ್ಟು ಅದ್ಭುತಗಳನ್ನು ಸಾಧಿಸಿತೋ ಬಲ್ಲವರಾರು? ಅವರ ಆ ಮೇರೆಯರಿಯದ ಆತ್ಮೀಯತೆ ಕಾಲ, ದೇಶ ಮತ್ತು ಪಾತ್ರಗಳ ದೃಷ್ಟಿಯಿಂದ ಸೀಮಿತವಾದುದಲ್ಲ! ಅದು ಅನಂತ! ಆದ್ದರಿಂದಲೇ ಅವರು ಅಂದು 'ನೀವೆಲ್ಲ ನನ್ನವರು' ಎಂದದ್ದು ಇಂದೂ ಸರ್ವರಿಗೂ ಅನ್ವಯಿಸುತ್ತದೆ! ಏಕೆಂದರೆ ಶ್ರೀರಾಮಕೃಷ್ಣರಂತೆಯೇ ಅವರ ಮಾನಸಪುತ್ರ ಸ್ವಾಮಿ ಬ್ರಹ್ಮಾನಂದರು ಕೂಡ ನಮ್ಮೆಲ್ಲರಿಗೂ ಅತ್ಯಂತ ಸ್ವಂತದವರು! ✷

## ದೇವರೇ ಕಾವಲುಗಾರನಾದರೆ...

ಒಂದು ದಿನ ಕೆಲವು ಮಂದಿ ಕಳ್ಳರು ತುಳಸೀದಾಸರ ಆಶ್ರಮಕ್ಕೆ ಕದಿಯಲು ಬಂದರು. ಆದರೆ ಆಶ್ರಮದ ಹೊರಗೆ ಒಬ್ಬ ಹುಡುಗ ಬಿಲ್ಲು, ಬಾಣಗಳನ್ನು ಹಿಡಿದು ಕಾವಲು ಕಾಯುತ್ತ ನಿಂತಿದ್ದ. ಅವರು ಸಂತ ತುಳಸೀದಾಸರನ್ನು ಕಂಡು, ಅವರ ಆಶ್ರಮವನ್ನು ಕಾಯುತ್ತ ನಿಂತ ಹುಡುಗನು ಯಾರು ಎಂದು ಕೇಳಿದರು. ಅಲ್ಲಿ ನಿಂತ ಹುಡುಗ ಬೇರೆ ಯಾರೂ ಅಲ್ಲ, ಸ್ವತಃ ಶ್ರೀರಾಮನೇ ಆಗಿದ್ದಾನೆ, ತನ್ನ ಸೊತ್ತುಗಳನ್ನು ರಕ್ಷಿಸಲು ಅವನು ಇಷ್ಟೊಂದು ತೊಂದರೆ ತೆಗೆದುಕೊಂಡಿದ್ದಾನೆ ಎಂದು ತುಳಸೀದಾಸರಿಗೆ ಅರ್ಥವಾಯಿತು. ದೇವರಿಗೆ ಕಷ್ಟ ಕೊಡಬಾರದೆಂದು, ಕೂಡಲೇ ಅವರು ತಮ್ಮ ಸೊತ್ತನ್ನೆಲ್ಲ ಬಡವರಿಗೆ ಹಂಚಿಬಿಟ್ಟರು.



# ಸೋದರಿ ನಿವೇದಿತಾ

## (ನಾಟಕ)

ರಚನೆ
ಪಾಂಡುರಂಗ ಜೋಯಿಸ್ ಕೆ.ಎನ್.
ಸರಗೂರು ರಮೇಶ್

### ಭಾಗ ೨

### ದೃಶ್ಯ -೬

**(ಶ್ರೀಮಾತೆ - ಮಂಚದ ಮೇಲೆ, ಮಾರ್ಗರೆಟ್ ಕೆಳಗೆ. ಜನರಿಗೆ ಆಶ್ಚರ್ಯ)**

**ಶ್ರೀಮಾತೆ :** ಬಾ... ಮಗು... ಇಲ್ಲಿ ಕುಳಿತುಕೋ.

**ಮಾರ್ಗರೆಟ್:** (ನಿಧಾನವಾಗಿ ಬಳಿಸಾರಿ... ಕುಳಿತುಕೊಳ್ಳುವಳು.)

**ಶ್ರೀಮಾತೆ :** ನಿನ್ನ ಹೆಸರೇನು ಮಗು?

**ಮಾರ್ಗರೆಟ್ :** ಮಾರ್ಗರೆಟ್ ನೋಬಲ್.


ಕಲೆ: ಸುನಿಲ್ .ಜಿ.ಟಿ

**ಶ್ರೀಮಾತೆ :** ಅಷ್ಟು ಕಷ್ಟದ ಹೆಸರು ನಾನು ಕರೆಯಲಾರೆ ಕಂದ. ನಾನು ನಿನ್ನನ್ನು ಖೂಕಿ (ಮಗು) ಅಂತಾ ಕರೀತೀನಿ. ನಿನ್ನ ಅಮ್ಮ ಎಲ್ಲಾ ಚೆನ್ನಾಗಿದ್ದಾರಾ?

**ಮಾರ್ಗರೆಟ್ :** ನಿಮಗೆ ನನ್ನ ಬಗ್ಗೆ ಹೇಗೆ ತಿಳಿಯಿತು... ಅಮ್ಮ?

**ಶ್ರೀಮಾತೆ :** ನರೇನ್ ನನಗೆ ಎಲ್ಲಾ ತಿಳಿಸಿದ್ದಾನೆ. ನಮ್ಮ ನರೇನ್ ದೇವರಿಗೆ ನಿವೇದಿಸಲು ವಿದೇಶದಿಂದ ಆಯ್ದು ತಂದಿರುವ ದೇವ ಪುಷ್ಪ ಮಗು ನೀನು. ಬಿಳಿಯ ತಾವರೆಯಂತೆ ಶೋಭಿಸುತ್ತಿರುವೆ. ಸ್ವಲ್ಪ ತಿಂಡಿ ತಿನ್ನು... ಮಗು ...

**ಮಾರ್ಗರೆಟ್ :** ... ನಾ ...... ನು.... ಇಲ್ಲಿ?!

**ಶ್ರೀಮಾತೆ :** ಓ..... ಹುಚ್ಚು ಹುಡುಗಿ..... ಬಾ ಇಲ್ಲಿ..... ಆ..... ಅನ್ನು..

**ಮಾರ್ಗರೆಟ್ :** (ಹಿಂಜರಿಯುವಳು)

**ಶ್ರೀಮಾತೆ :** ಬಾ..... ಇಲ್ಲಿ (ತಮ್ಮ ಕೈಯಾರೆ ತಿಂಡಿ ತಿನ್ನಿಸುವರು) ವಿದೇಶ..... ಪರದೇಶ ಅನ್ನೋದು ಎಲ್ಲಿದೆ ಮಗು? ಪರಮಹಂಸರು ಬಂದು ಅಂಥಾ ಭೇದಭಾವಗಳನ್ನೆಲ್ಲಾ ತೊಡೆದು ಹಾಕಿದ್ದಾರೆ. ಎಲ್ಲಾ ಮಾರ್ಗಗಳೂ ಸತ್ಯಕ್ಕೆ ದಾರಿಗಳು. ನನ್ನ ನರೇನ್ ಈ ಸಂದೇಶಾನ ಜಗತ್ತಿಗೆಲ್ಲಾ ಹರಡುತ್ತಾನೆ. ಪೂರ್ವ, ಪಶ್ಚಿಮ, ಉತ್ತರ, ದಕ್ಷಿಣ ಅಂತಿರೋದನ್ನ ನರೇನ್ ಠಾಕೂರರ ಹೆಸರಲ್ಲಿ ಒಂದು ಮಾಡುತ್ತಾನೆ.

**ಮಾರ್ಗರೆಟ್:** ಅಮ್ಮಾ....ಅಮ್ಮಾ...(ಕಂಬನಿಗರೆಯುತ್ತಾ... ಶ್ರೀಮಾತೆಯವರ ತೊಡೆಯ ಮೇಲೆ ಮಲಗುವಳು.)

**ಶ್ರೀಮಾತೆ :** (ಮಾರ್ಗರೆಟಳ ಕೂದಲು - ಹಣೆಯನ್ನು ನೇವರಿಸುತ್ತಾ ಇರುವರು)

### ದೃಶ್ಯ -೭

*ವಾಣಿ : ಮುಂದೆ ಸ್ವಾಮೀಜಿಯವರು ದೇವಸ್ಥಾನಕ್ಕೆ ಹೋಗಿ ಹೇಗೆ ಪೂಜಿಸಬೇಕೆಂಬುದನ್ನು ಅವಳಿಗೆ ತಿಳಿಸಿದರು. ೧೮೯೮ರ ಮಾರ್ಚ್ ೨೫ ರಂದು ಶುಕ್ರವಾರ ಸ್ವಾಮೀಜಿಯವರು ಮಾರ್ಗರೆಟ್‌ಗೆ ಬ್ರಹ್ಮಚರ್ಯ ದೀಕ್ಷೆಯನ್ನಿತ್ತರು. ಹಿಂದಿನ ದಿನ ಉಪವಾಸ ಮೌನವ್ರತಗಳನ್ನು ಅವಳಿಂದ ಮಾಡಿಸಿದ್ದರು. ಅವಳಿಗೆ* ***ನಿವೇದಿತಾ*** *ಎಂದು ನಾಮಕರಣ ಮಾಡಿದರು.*

(ಬ್ರಹ್ಮಚರ್ಯ ದೀಕ್ಷೆ ಮತ್ತು ಮಂತ್ರ. ೪-೫ ಸಂನ್ಯಾಸಿಗಳು)



**ಸ್ವಾಮೀಜಿ :** (ಸರಳವಾದ ಪೂಜೆ – ಹೋಮ.) (ಭಸ್ಮವನ್ನು ಅವಳ ಹಣೆಗೆ ಇಟ್ಟು) ನೀನು ಬುದ್ಧನ ಮಾರ್ಗದಲ್ಲಿ ನಡೆ. ಇತರರಿಗಾಗಿ ಆತ ೫೦೦ ಜನ್ಮಗಳನ್ನು ಪ್ರಾಣಾರ್ಪಣೆ ಮಾಡಿದನು.

**ನಿವೇದಿತಾ :** ಇದು ನನ್ನ ಜೀವನದ ಅತ್ಯಂತ ಆನಂದದ ದಿನ. (ಎದ್ದು ಬುದ್ಧನ ವಿಗ್ರಹಕ್ಕೆ ಹೂವಿನಿಂದ ಅರ್ಚನೆ ಹಾಗೂ ನಮಸ್ಕಾರ)

## ದೃಶ್ಯ -೮

(ಶಿವನ ರೂಪದಲ್ಲಿ ಸ್ವಾಮೀಜಿ. ನೃತ್ಯ ಮತ್ತು ಹಾಡು)

*ವಾಣಿ : ನಂತರ ಸ್ವಾಮೀಜಿಯವರು ನಿವೇದಿತಾರೊಂದಿಗೆ ಉತ್ತರ ಭಾರತದ ಕಡೆ ಯಾತ್ರೆ ಪ್ರಾರಂಭಿಸಿದರು. ಮೊದಲು ಪಾಟ್ನಾಗೆ, ಬುದ್ಧನ ಬೋಧಗಯೆ, ಹಿಮಾಲಯದ ಕಾಶ್ಮೀರ, ಅಮರನಾಥ – ಹೀಗೆ ಹೋದ ಕಡೆಯಲ್ಲೆಲ್ಲಾ ಸ್ವಾಮೀಜಿಯವರು ನಿವೇದಿತಾಳಿಗೆ ಹಿಂದೂ ಸಂಸ್ಕೃತಿಯ ಬಗ್ಗೆ, ಆದರ್ಶದ ಬಗ್ಗೆ ವಿವರಿಸುತ್ತಿದ್ದರು. ಆತ್ಮನ ಮೋಕ್ಷ ಮತ್ತು ಜಗತ್ತಿನ ಹಿತ ಎಂಬ ಭಾವವನ್ನು ಚೆನ್ನಾಗಿ ವಿವರಿಸಿದರು. ಒಬ್ಬನು ಭಗವಂತನನ್ನು ಸಾಕ್ಷಾತ್ಕಾರ ಮಾಡಿಕೊಳ್ಳಲು ಧ್ಯಾನ ಜಪಗಳನ್ನು ಮಾಡಬೇಕು. ಅನಂತರ ಎಲ್ಲರ ಒಳ್ಳೆಯದಕ್ಕೂ ತನ್ನ ಬಾಳನ್ನು ಅರ್ಪಿಸಬೇಕು ಎಂಬ ಸಿದ್ಧಾಂತವನ್ನು ನಿವೇದಿತಾ ಅರ್ಥಮಾಡಿಕೊಂಡಳು. ಒಂದು ದಿನ ಸ್ವಾಮೀಜಿಯವರು ನಿವೇದಿತಾಳಿಗೆ ಕೋಲ್ಕತ್ತದಲ್ಲಿ ಶಾಲೆಯನ್ನು ತೆರೆಯಲು ಆಶೀರ್ವದಿಸಿದರು. ಆ ವಿಷಯದಲ್ಲಿ ಆಕೆಗೆ ಪೂರ್ಣ ಸ್ವಾತಂತ್ರ್ಯವನ್ನು ಕೊಟ್ಟರು. ೧೮೯೮ರ ನವೆಂಬರ್ ೧೩ ರಂದು ನಿವೇದಿತಾ ಶಾಲೆ ಪ್ರಾರಂಭ. ಅಂದು ಕಾಳೀಪೂಜೆಯ ದಿನವಾಗಿತ್ತು.*

## ದೃಶ್ಯ -೯

(ಕೋಲ್ಕತ್ತದಲ್ಲಿ ಶಾಲೆ ಆರಂಭ – ಶ್ರೀಮಾತೆ ಹಾಗೂ ಸ್ವಾಮೀಜಿಯವರ ಭೇಟಿ; ಶಾಲೆಯ ಚಟುವಟಿಕೆ)



**ಶ್ರೀಮಾತೆ:** ಕಾಳೀಮಾತೆಯ ಸಂಪೂರ್ಣ ಅನುಗ್ರಹ ನಿನ್ನ ಮೇಲಿದೆ. ಮಕ್ಕಳು ಆದರ್ಶ ಪ್ರಾಯರಾಗಿರುತ್ತಾರೆ. (ಹರಸುವರು)

**ಸ್ವಾಮೀಜಿ :** ಶ್ರೀ ಜಗನ್ಮಾತೆ ನಿನಗೆ ಎಲ್ಲವನ್ನೂ ಕರುಣಿಸಲಿ. ಜಗನ್ಮಾತೆ ನಿನ್ನ ಮನಸ್ಸು, ಬುದ್ಧಿಗಳಲ್ಲಿ ಸ್ಫೂರ್ತಿ ಮತ್ತು ಬೆಳಕನ್ನು ನೀಡಲಿ. ನಿನಗೆ ಹೆಚ್ಚಿನ ಸ್ವಾತಂತ್ರ್ಯ, ಶಕ್ತಿಯನ್ನು ನೀಡುವಂತೆ ಜಗನ್ಮಾತೆಯನ್ನು ಪ್ರಾರ್ಥಿಸುವೆನು. ಅದರೊಂದಿಗೆ ಅಪಾರ ಶಾಂತಿಯೂ ನಿನ್ನದಾಗಲಿ. ಇದೊಂದು ಆದರ್ಶ ಶಾಲೆಯಾಗಲಿ (ಆಶೀರ್ವಾದ – ಹೋಗುವರು)

(ತರಗತಿಯಲ್ಲಿ)

**ನಿವೇದಿತಾ:** ಮಕ್ಕಳೇ, ನಿಮ್ಮೆಲ್ಲರ ಭಾರತದ ರಾಣಿ ಯಾರು?

**ಬಾಲಕಿ – ೧:** ವಿಕ್ಟೋರಿಯಾ ರಾಣಿ.

**ನಿವೇದಿತಾ:** (ನಿರಾಶೆಯಿಂದ) ಓ ಮಗುವೇ, ಅದು ಹೇಗೆ ವಿಕ್ಟೋರಿಯಾ ರಾಣಿ ಭಾರತದ ರಾಣಿಯಾಗುವಳು? ನಿಮ್ಮ ದೇಶದ ಸಂಸ್ಕೃತಿಯ ಬಗ್ಗೆ ನೀವೇ ಎಷ್ಟು ಅಜ್ಞಾನದಿಂದ ಇದ್ದೀರಿ!

**ಬಾಲಕಿ – ೨:** ಮತ್ತೆ ನಮ್ಮ ದೇಶದ ಆದರ್ಶ ರಾಣಿ ಯಾರು?

**ನಿವೇದಿತಾ:** ಭಾರತದ ನಿಜವಾದ ಆದರ್ಶ ನಾರಿಯರೆಂದರೆ ಸೀತಾ, ಸಾವಿತ್ರಿ, ದಮಯಂತಿಯರು. ವಿಕ್ಟೋರಿಯಾ ನಿಮಗೆಂದಿಗೂ ರಾಣಿಯಲ್ಲ. ಇಂದಿನಿಂದ ನಾವು ನಮ್ಮ ಭಾರತದೇಶದ ಇತಿಹಾಸವನ್ನು ಚೆನ್ನಾಗಿ ತಿಳಿಯೋಣ.

(ಶಾಲೆಯಲ್ಲಿ – ಆಟ- ಪಾಠ- ಚಿತ್ರಕಲೆ; ಹುಣಿಸೆ ಬೀಜದಿಂದ ಗಣಿತ)

*ವಾಣಿ: ನಿವೇದಿತಾ ತಾನೇ ಶಾಲೆಯಲ್ಲಿ ಮಕ್ಕಳಿಗೆ ಒತ್ತಾಯದಿಂದ ಏನನ್ನೂ ಕಲಿಸದೆ, ಆಟಗಳ ನಡುವೆ ಅವರವರ ಮನೋವೃತ್ತಿಗಳಿಗೆ ಅನುಗುಣವಾಗಿ ಕಲಿಸುತ್ತಿದ್ದಳು. ಚಿಕ್ಕವರಿಗೆ ಅಕ್ಷರಾಭ್ಯಾಸ, ದೊಡ್ಡವರಿಗೆ ರಾಷ್ಟ್ರೀಯತೆ, ಪ್ರೀತಿ ಮತ್ತು ಸೇವೆಯನ್ನು ಕಲಿಸುತ್ತಿದ್ದಳು. ಜನ ಅವಳನ್ನು ಪ್ರೀತಿಸುತ್ತಿದ್ದರು. ಅವಳ ಹಂಬಲವನ್ನು ಅರಿತ ಸ್ವಾಮೀಜಿ, ಅವಳನ್ನು ರಾಮಕೃಷ್ಣ ಸಂಘದ ಸದಸ್ಯೆಯನ್ನಾಗಿಸಿದರು.*

*ಮುಂದಿನ ವರ್ಷ ಮೇನಲ್ಲಿ ಪ್ಲೇಗ್ ಜಾಡ್ಯ ಕೊಲ್ಕತ್ತೆಗೆ ಹರಡಿತು. ಕೊಲ್ಕತ್ತೆಯಲ್ಲಿ ಪ್ಲೇಗ್ ಬಂದಾಗ ನಿವೇದಿತಾ ಪೊರಕೆ ಹಿಡಿದು ಕಸ ಬಳಿದಳು. ಪ್ರವಾಹದಿಂದ ಜನ ಬಳಲಿದಾಗ ನೆರವು ನೀಡಿದಳು. ರೋಗಿ ಮಕ್ಕಳನ್ನು ತನ್ನ ತೊಡೆಯ ಮೇಲೆ ಮಲಗಿಸಿಕೊಂಡು ಸೇವೆ ಮಾಡಿದಳು. ತಾನು ಉಪವಾಸವಿದ್ದೂ ಹಸಿದವರಿಗೆ ಊಟ ನೀಡಿದಳು. ಆಗ ನಿವೇದಿತಾ ಭಾರತಕ್ಕೆ ಸಲ್ಲಿಸಿದ ಸೇವೆಯು ಅನುಪಮವಾದದ್ದು; ಅವಳ ಭಾರತಪ್ರೇಮ ಅನನ್ಯವಾದುದು. ಭರತಖಂಡದ ಸೇವೆಯೇ ತಾನು ಸ್ವಾಮೀಜಿಗೆ ಮಾಡುವ ಕರ್ತವ್ಯವೆಂದು ಆಕೆ ಭಾವಿಸಿದಳು.*

*(ಮುಂದಿನ ಸಂಚಿಕೆಗೆ)*

# ಶ್ರೀಮಾತೆ

ಮೂಲ ಬಂಗಾಳಿ : **ಆಶುತೋಷ್ ಮಿತ್ರ**

ಅನುವಾದ : **ಸ್ವಾಮಿ ಜ್ಞಾನಯೋಗಾನಂದ**

## ಭಾಗ ೧೫



ವಿಲಾಸನ ಹೆಸರು ಬ್ರಹ್ಮಚಾರಿ ಕಪಿಲ[೧] ಎಂದಾಗಿತ್ತು. ಹುಡುಗ ತುಂಬ ಒಳ್ಳೆಯವನು, ಶ್ರೀಮಾತೆಯವರ ಶಿಷ್ಯ. ಅವನು ನಾಗ ಮಹಾಶಯನ ಭಕ್ತ; ಢಾಕಾದ ನಾರಿಂದಾ ನಿವಾಸಿಯಾದ ಹರಪ್ರಸನ್ನ ಮಜುಂದಾರ ಅವನನ್ನು ಬೇಲೂರು ಮಠಕ್ಕೆ ಕರೆದುಕೊಂಡು ಬಂದಿದ್ದ. ಹುಡುಗ ತುಂಬ ಒಳ್ಳೆಯವನೆಂದು ಕಂಡು ಬಂದದ್ದರಿಂದ ಅವನನ್ನು 'ಉದ್ಬೋಧನ'ದಲ್ಲಿ, ಉದ್ಬೋಧನ ಕಾರ್ಯಾಲಯದಲ್ಲಿ ಸಹಾಯಕನನ್ನಾಗಿ ನೇಮಿಸಲಾಗಿತ್ತು. ಅವನು ಬಂದ ಕೆಲವು ದಿನಗಳ ನಂತರ ರಾಸಬಿಹಾರಿ[೨] ಎಂಬ ಇನ್ನೊಬ್ಬ ಹುಡುಗನೂ ಬೇಲೂರು ಮಠಕ್ಕೆ ಬಂದಿದ್ದ. ಅವನೂ ಶ್ರೀಮಾತೆಯವರ ಶಿಷ್ಯ. ಆ ಹುಡುಗ ತುಂಬಾ ಸರಳ ಸ್ವಭಾವದವನು. ಅವನನ್ನು 'ಉದ್ಬೋಧನ ಕಾರ್ಯಾಲಯ'ದಲ್ಲಿ ಸಹಾಯಕನನ್ನಾಗಿ ನೇಮಿಸಲಾಯಿತು.

ಬಾಬುರಾಮ ಮಹಾರಾಜರ ತಮ್ಮ ಶಾಂತಿರಾಮಬಾಬು ಮೊದಲೇ ರೈಲುಗಾಡಿಗೆ ಎರಡನೇ ದರ್ಜೆಯ ಕೋಣೆಯನ್ನು ರಿಸರ್ವ್ ಮಾಡಿದ್ದರು. ಇಂಟರ್‌ಕ್ಲಾಸ್‌ನ ಮೂರು ಟಿಕೆಟ್‌ಗಳನ್ನು ಬುಕ್ ಮಾಡಿಸಿದ್ದರು. ಎರಡನೇ ದರ್ಜೆಯ ಕೋಣೆಯಲ್ಲಿ ಶ್ರೀಮಾತೆ, ರಾಧು, ಸಣ್ಣತ್ತೆ, ಗೋಲಾಪ್ ಮಾ, ರಾಮನ ತಾಯಿ ಹಾಗೂ ನಿತಾಯಿಯ ತಾಯಿ ಹೊರಟರು. ನಾವು ಮೂರು ಜನ ಇಂಟರ್‌ಕ್ಲಾಸ್‌ನಲ್ಲಿ ಹೊರಟೆವು. ರಾಮನೂ ತನಗಾಗಿ ಒಂದು ಟಿಕೆಟ್ ಖರೀದಿಸಿ, ನಮ್ಮೊಂದಿಗೆ ಇಂಟರ್‌ಕ್ಲಾಸಿನಲ್ಲಿ ಹೊರಟ.

ಸುಮಾರು ಅರ್ಧರಾತ್ರಿಯ ವೇಳೆಗೆ ರೈಲು ಭದ್ರಕ್ ಸ್ಟೇಶನನ್ನು ತಲುಪಿದಾಗ, ಬಾಬುರಾಮ ಮಹಾರಾಜರ ಅಣ್ಣ ತುಳಸೀರಾಮ ಬಾಬು ಹಾಗೂ ರಾಮನ ಜಮೀನ್ದಾರಿ ಮ್ಯಾನೇಜರ್ ಹರಪ್ರಸನ್ನ ಮಜುಂದಾರ್ ಇವರೆಲ್ಲ ವಾಹನಗಳೊಂದಿಗೆ ಕಾಯುತ್ತಿದ್ದರು. ಭದ್ರಕ್‌ನಲ್ಲಿ ರಾಮನ ನ್ಯಾಯಾಲಯದ ಮನೆಯಲ್ಲಿ ಅವನ ಮಾವ ತುಳಸೀರಾಮಬಾಬು ತಂಗಿದ್ದ. ಅವನು ಇನ್ನಿಲ್ಲದಂತೆ ಪ್ರಾರ್ಥಿಸಿಕೊಂಡಿದ್ದರಿಂದ ಶ್ರೀಮಾತೆ ಕೆಲವು ನಿಮಿಷಗಳ ಮಟ್ಟಿಗಾದರೂ ಅಲ್ಲಿಗೆ ಹೋಗಿ ಬರಲು ಮುಂದಾದರು. ಅನಂತರ ಪಲ್ಲಕ್ಕಿ ಹಾಗೂ ತಂಜಾಮು (ಒಂದು ರೀತಿಯ ಅಲಂಕರಿಸಿದ ಪಲ್ಲಕ್ಕಿ) ಗಳಲ್ಲಿ ಎಂಟು-ಒಂಬತ್ತು ಕ್ರೋಶ (ಇಪ್ಪತ್ತೆಂಟು ಮೈಲಿ) ದೂರದಲ್ಲಿರುವ ಕೋಠಾರ್‌ಗೆ ಹೋದೆವು. ಅಲ್ಲಿ ತಾಯಂದಿರನ್ನು ಇಳಿಸಿ, ತಂಜಾಮುಗಳು ಮರಳಿ ಬಂದ ಮೇಲೆ ನಾವೆಲ್ಲರೂ ಅಲ್ಲಿಗೆ ಹೋದೆವು.

ಕೋಠಾರ್‌ನಲ್ಲಿ ಶ್ರೀಮಾತೆ ಒಂದು ಮನೆಯಲ್ಲಿ ಹಾಗೂ ನಾವು ನ್ಯಾಯಾಲಯದ ಮನೆಯಲ್ಲಿ ಇಳಿದುಕೊಂಡೆವು. ಹೆಚ್ಚು ಕಡಿಮೆ ಎರಡು ತಿಂಗಳು ನಾವು ಅಲ್ಲಿದ್ದೆವು. ದಿನದಲ್ಲಿ ಎರಡು ಬಾರಿ ಶ್ರೀಮಾತೆ ನಮ್ಮೊಂದಿಗೆ ಮಾತುಕತೆ ನಡೆಸಲು, ಪತ್ರಗಳನ್ನು ಓದಿಸಲು ಹಾಗೂ ಉತ್ತರ ಬರೆಸಲು ಕಿಟಕಿ ಮಹಲಿಗೆ ಬರುತ್ತಿದ್ದರು; ನಾವು ಕಿಟಕಿ ದ್ವಾರದ ಮೂಲಕ ಅಲ್ಲಿಗೆ ಹೋಗುತ್ತಿದ್ದೆವು. ನಾವು ಅಲ್ಲಿದ್ದಾಗ ಒಂದು ದಿನ ಕೇದಾರ (ಸ್ವಾಮಿ ಅಚಲಾನಂದ) ಅಲ್ಲಿಗೆ ಬಂದಿದ್ದರು, ಹಾಗೂ ಅಲ್ಲಿಯೇ ತಂಗಿದ್ದರು. ಬೇರೆಯವರ ಮನೆಯಲ್ಲಿ ಬಂಧನದಲ್ಲಿದ್ದಂತೆ ಇದ್ದುದರಿಂದ ಸಣ್ಣತ್ತೆಗೆ ತಲೆ ಕೆಟ್ಟು ಹೋಗಿ, ಶ್ರೀಮಾತೆಯವರ ಆದೇಶದಂತೆ ನಾನು ಅವರನ್ನು ಜಯರಾಮಬಾಟಿಗೆ ಕರೆದುಕೊಂಡು ಹೋಗಿ ಬಿಟ್ಟುಬಂದೆ.

ಕೋಠಾರ್‌ನಲ್ಲಿ ಎರಡು ಹೊತ್ತು ಮುಖ್ಯದ್ವಾರದ ಮೂಲಕ ಒಳಮನೆಗೆ ಹೋಗಿ ನಾವು ಊಟ ಮಾಡಿ ಬರುತ್ತಿದ್ದೆವು. ತಿಂಡಿ ಹಾಗೂ ಚಹಾ ನ್ಯಾಯಾಲಯದ ಮನೆಗೇ ಬರುತ್ತಿದ್ದವು. ಶುಕುಲ್ ಮಹಾರಾಜ್, ಕೃಷ್ಣಲಾಲ್ ಮಹಾರಾಜ್ ಮತ್ತು ನಾನು – ಈ ಮೂವರಲ್ಲಿ ಇಬ್ಬರು ಪೂರ್ಣವಾಗಿ ಸಸ್ಯಾಹಾರಿಗಳು. ಇನ್ನೊಬ್ಬ ಮಾತ್ರ ಎರಡು ತಿಂಗಳಿಂದ ಸಸ್ಯಾಹಾರಿಯಾಗಿದ್ದ. ಹೀಗಾಗಲು ಕಾರಣವಿತ್ತು. ಯಾವ ಕಾರಣಕ್ಕಾಗಿ ಶ್ರೀಮಾತೆ ಮಾಂಸಾಹಾರ ಸೇವಿಸುತ್ತಿರಲಿಲ್ಲವೋ ಅದೇ ಕಾರಣಕ್ಕಾಗಿ ಅವನೂ ಸೇವಿಸುತ್ತಿರಲಿಲ್ಲ. ಈ ಮನೋಭಾವವನ್ನು ಅವನು ತನ್ನೊಳಗೇ ಇಟ್ಟುಕೊಂಡಿದ್ದ; ಅದನ್ನು ಯಾರ ಮುಂದೆಯೂ ವ್ಯಕ್ತಪಡಿಸುತ್ತಿರಲಿಲ್ಲ. ಒಂದು ದಿನ ಎಲ್ಲರೂ ಮಧ್ಯಾಹ್ನದ ಊಟಕ್ಕೆ ಕುಳಿತಿದ್ದೆವು. ಗೋಲಾಪ್ ಮಾ ಅಲ್ಲಿಗೆ ಬಂದು, ಶ್ರೀಮಾತೆಯವರ ಹೆಸರು ಹೇಳಿ, ಆ ಮೂರನೆಯ ಭಕ್ತನಿಗೆ ಮೀನು ತಿನ್ನಲು ಹೇಳಿದರು. ಅಲ್ಲದೆ ಗೋಲಾಪ್ ಮಾ ಹೇಳಿದಳು: ''ಇದನ್ನು ತಿನ್ನಲು ಶ್ರೀಮಾತೆ ಕಳುಹಿಸಿಕೊಟ್ಟಿದ್ದಾರೆ.'' ಆದರೂ ಅದಕ್ಕೆ ಆತ ಒಪ್ಪಲಿಲ್ಲ. ಗೋಲಾಪ್ ಮಾ ಅಲ್ಲಿಂದ ಹೊರಟುಹೋದಳು. ಮರುಕ್ಷಣವೇ ಶ್ರೀಮಾತೆ ಅಲ್ಲಿಗೆ ಬಂದು, ತಮ್ಮ ಕೈಯಿಂದಲೇ ಎರಡು ದೊಡ್ಡ ನಳ್ಳಿ ಮೀನನ್ನು ಆತನ ತಟ್ಟೆಗೆ ಹಾಕಿ, ''ಏನಾದರೂ ಹೇಳುವುದಿದ್ದರೆ ಸಾಯಂಕಾಲ ಹೇಳು. ಈಗ ಇದನ್ನು ತಿನ್ನು'' ಎಂದರು.

---

೧ ಮುಂದೆ ಅವರ ಹೆಸರು ಸ್ವಾಮಿ ವಿಶ್ವೇಶ್ವರಾನಂದ ಎಂದು. *(-ಸಂ.)*

೨ ಮುಂದೆ ಸ್ವಾಮಿ ಅರೂಪಾನಂದ. *(-ಸಂ.)*

ಭಕ್ತ ಅದನ್ನು ಸ್ವೀಕರಿಸಿದ. ಅನಂತರ ಸೂಕ್ತ ಸಮಯದಲ್ಲಿ ಶ್ರೀಮಾತೆ ಕಿಟಕಿ ಮಹಲಿಗೆ ಬರಲು ಅವನಿಗೆ ಕರೆ ಕಳುಹಿಸಿದರು. ಅವರ ನಡುವೆ ನಡೆದ ಮಾತುಕತೆಯನ್ನಿಲ್ಲಿ ನೀಡುತ್ತಿದ್ದೇನೆ:

**ಶ್ರೀಮಾತೆ :** ಮೀನು ತಿನ್ನುವುದನ್ನೇಕೆ ಬಿಟ್ಟು ಬಿಟ್ಟೆ?

**ಭಕ್ತ :** ನೀವೇಕೆ ತಿನ್ನುತ್ತಿಲ್ಲ?

**ಶ್ರೀಮಾತೆ :** (ಗಂಭೀರವಾಗಿ) ನಾನೇನು ಒಂದೇ ಬಾಯಿಯಿಂದ ತಿನ್ನುತ್ತಿದ್ದೇನೇನು? ನೀನೇಕೆ ಅದರ ಬಗ್ಗೆ ಚಿಂತಿಸುತ್ತಿದ್ದೀಯಾ? ಹೆಡ್ಡನಂತೆ ವರ್ತಿಸಬೇಡ, ಮೀನು ತಿನ್ನು. ನಾನು ಹೇಳುತ್ತಿದ್ದೇನೆ, ತಿನ್ನು.

ಅಂದಿನಿಂದ ಆರಂಭಗೊಂಡು, ಆ ಭಕ್ತ ತನ್ನ ಜೀವನವಿಡೀ ಮಾಂಸಾಹಾರಿಯಾಗಿಯೇ ಉಳಿದ.

ರಾಮ (ರಾಮಕೃಷ್ಣ ಬಸು) ಮಂತ್ರದೀಕ್ಷೆ ಪಡೆದಿರಲಿಲ್ಲ. ಸರಸ್ವತೀ ಪೂಜೆಯ ದಿನ ಅವನು ಪತ್ನಿಯೊಂದಿಗೆ (ಅವನ ಪತ್ನಿ, ಸುಶೀಲಬಾಲಾ) ಶ್ರೀಮಾತೆಯವರಿಂದ ಮಂತ್ರದೀಕ್ಷೆ ಪಡೆದುಕೊಂಡ. ದೂರದ ಶಿಲ್ಲಾಂಗ್‌ನಿಂದ ಬಂದ ಇಬ್ಬರು ಭಕ್ತರೂ ದೀಕ್ಷೆ ಪಡೆದುಕೊಂಡು ಹೋದರು.

ರಾಮನಿಗೆ ಅಲ್ಲೊಂದು ದೇವಾಲಯವಿತ್ತು. ಅಲ್ಲಿ ರಾಧಾಕೃಷ್ಣರಿಗೆ ಪ್ರತಿದಿನ ಪೂಜೆ ನಡೆಯುತ್ತಿತ್ತು. ದೇಗುಲದ ಮುಂದೆ ವಿಶಾಲವಾದ ಒಂದು ಪ್ರಾಂಗಣವಿತ್ತು. ಅಲ್ಲಿ ಹಲವು ಬಾರಿ ಜಾತ್ರಾ, (ನಾಟಕ) ಇತ್ಯಾದಿಗಳು ನಡೆಯುತ್ತಿದ್ದವು. ಮಂದಿರದ ಪ್ರಾಂಗಣದಲ್ಲಿ ಪ್ರತಿದಿನ ಸರಸ್ವತೀಪೂಜೆ ಕೂಡ ನಡೆಯುತ್ತಿತ್ತು.

ಕೊತಾರ್‌ನಲ್ಲಿ ಶ್ರೀಮಾತೆ ಮಾಡಿದ ಒಂದು ಮಹತ್ಕಾರ್ಯವನ್ನು ಶ್ರೀರಾಮಕೃಷ್ಣರೂ ಮಾಡಿರಲಿಲ್ಲ. ಶ್ರೀರಾಮಕೃಷ್ಣರು ವಿಧಿಪ್ರಕಾರ ಶ್ರೀಮಾತೆಯವರಿಗೆ ಎಲ್ಲವನ್ನೂ ಕಲಿಸಿಕೊಟ್ಟು ಕೊನೆಗೆ, ''ನಿನ್ನ ಬಳಿಗೆ ಹಲವು ಮಂದಿ ಬರುತ್ತಾರೆ. ಅವರನ್ನು ನೀನು ನೋಡಿಕೊಳ್ಳಬೇಕು'' ಎಂದು ಹೇಳಿದುದು ಇದಕ್ಕಾಗಿಯೆ? ಯಾರು ಈ ಕಾರ್ಯದಲ್ಲಿ ನಿಮಿತ್ತವಾದರೋ ಅವರ ಜೀವನವೂ ಸಾರ್ಥಕಗೊಂಡಿತು. ಎಲ್ಲಕ್ಕಿಂತ ಹೆಚ್ಚಾಗಿ ರಾಮನೇ ಧನ್ಯ — ಏಕೆಂದರೆ ಅವನ ಜಮೀನ್ದಾರಿಕೆಯಲ್ಲಿ, ಅವನ ಸಮ್ಮುಖದಲ್ಲೇ ಈ ಕಾರ್ಯ ನಡೆಯಿತು. ಕೊತಾರ್‌ನ ಪೋಸ್ಟ್‌ಮಾಸ್ಟರ್ ದೇವೇಂದ್ರನಾಥ ಚಟ್ಟೋಪಾಧ್ಯಾಯ ಯೌವನದ ಆವೇಗದಲ್ಲಿ ಒಬ್ಬಾಕೆ ಕ್ರೈಸ್ತಧರ್ಮಕ್ಕೆ ಸೇರಿದ ಯುವತಿಯ ಪ್ರಣಯಕ್ಕೆ ಒಳಗಾದ. ಅವನು ಆ ಧರ್ಮಕ್ಕೆ ಮತಾಂತರಗೊಂಡು ಅವಳನ್ನು ಮದುವೆಯಾದ. ಕೆಲವು ಕಾಲದ ನಂತರ ಆಕೆ ಅವನನ್ನು ಬಿಟ್ಟು ಹೊರಟುಹೋದಳು. ದೇವೇಂದ್ರಬಾಬು ಎಷ್ಟು ಪ್ರಯತ್ನಪಟ್ಟರೂ ಅವಳನ್ನು ಮತ್ತೆ ಪಡೆಯಲಾಗದೆ ಹತಾಶೆಗೊಳಗಾಗಿದ್ದ. ಕಾಲಕ್ರಮದಲ್ಲಿ ಅವನಿಗೆ ಬೋಧೆಯುಂಟಾಯಿತು. ತನ್ನ ತಾತ್ಕಾಲಿಕ ದೃಷ್ಟಿದೋಷದ ಅಮಲಿನಿಂದಾಗಿ ತಾನು ಪರಧರ್ಮವನ್ನು ಸ್ವೀಕರಿಸಬೇಕಾಯಿತೆಂದು ಅವನಿಗೆ ಪಶ್ಚಾತ್ತಾಪವುಂಟಾಯಿತು.

ಹೀಗೆ ಅವನು ತೀರ ಪಶ್ಚಾತ್ತಾಪಪಟ್ಟುಕೊಂಡಿದ್ದ ವೇಳೆಯಲ್ಲೇ ನಮ್ಮ ಬಳಿಗೆ ಬಂದು ತನ್ನ ದುಃಖವನ್ನು ತೋಡಿಕೊಂಡ. ಅವನ ದುಃಖ ಎಷ್ಟೊಂದು ಮಡುಗಟ್ಟಿತ್ತೆಂದರೆ, ಅವನು ಪಶ್ಚಾತ್ತಾಪ ಪಡುವುದು ಹಾಗಿರಲಿ, ಮಗುವಿನಂತೆ ಜೋರಾಗಿ ಅಳ ತೊಡಗಿದ. ಅದನ್ನು ನೋಡಿ ನಮ್ಮೊಳಗೆ ಏನು ಮಾಡಬೇಕೆಂಬ ವಿಷಯದಲ್ಲಿ ಚರ್ಚೆಯುಂಟಾಯಿತು. ಕೊನೆಗೆ ಇದೆಲ್ಲವನ್ನೂ ಶ್ರೀಮಾತೆಯವರಿಗೆ ತಿಳಿಸಿದೆವು. ಶ್ರೀಮಾತೆ ರಾಮ ಹಾಗೂ ರಾಮನ ತಾಯಿಯ ದೇವಾಲಯ, ಮನೆಗಳಲ್ಲಿ ದೇವೇಂದ್ರ ಬಾಬುವಿನ ಶುದ್ಧಿಕರ್ಮವನ್ನು ನಡೆಸಲು ತೊಂದರೆಯೇನೂ ಇಲ್ಲವೆಂದರಿತು, ಅವನ ಪುನರ್ದೀಕ್ಷೆಗಾಗಿ ಆದೇಶ ನೀಡಿದರು. ಪರಿಣಾಮವಾಗಿ, ಸರಸ್ವತೀ ಪೂಜೆಯ ಹಿಂದಿನ ದಿನ ದೇವೇಂದ್ರ ಬಾಬು ತಲೆ ಬೋಳಿಸಿಕೊಂಡು, ರಾಧಾಶ್ಯಾಮಚಾಂದ ದೇವರ ಅರ್ಚಕರ ಸಹಕಾರದಿಂದ ಮಂದಿರದ ಪ್ರಾಂಗಣದಲ್ಲಿ, ಬ್ರಾಹ್ಮಣ ನಾಗಿದ್ದ ಕೃಷ್ಣಲಾಲ್‌ನಿಂದ (ಸ್ವಾಮಿ ಧೀರಾನಂದ) ಯಜ್ಞೋಪವೀತ ಧಾರಣೆ ಮಾಡಿ, ಗಾಯತ್ರೀ ಮಂತ್ರ ಸ್ವೀಕರಿಸಿ ಸ್ವಧರ್ಮಕ್ಕೆ ಮರುಪ್ರವೇಶ ಮಾಡಿದ. ಬ್ರಾಹ್ಮಣತ್ವವನ್ನು ಪಡೆದು, ಶ್ರೀಮಾತೆಯವರಿಗೆ ಪ್ರಣಾಮ ಮಾಡಲು ಹೋದಾಗ ಅವರು ಅವನಿಗೆ ಪ್ರತಿನಮಸ್ಕಾರ ಮಾಡಿದರು. ಮರುದಿನ, ಅಂದರೆ ಸರಸ್ವತೀಪೂಜೆಯಂದು ದೇವೇಂದ್ರನಾಥನು ಶ್ರೀಮಾತೆಯವರಿಂದ ಮಂತ್ರದೀಕ್ಷೆ ಪಡೆದ. ದೀಕ್ಷೆಯ ಕೊನೆಯಲ್ಲಿ ಶ್ರೀಮಾತೆ ಅವನಿಗೆ ಒಂದು ಧೋತಿಯನ್ನು ಕೊಟ್ಟರು. ಅಂದು ರಾಮನ ಆಮಂತ್ರಣದ ಮೇರೆಗೆ ದೇವೇಂದ್ರನಾಥನು ನಮ್ಮೊಂದಿಗೆ ಶ್ರೀಮಾತೆಯವರ ಪ್ರಸಾದ ಸ್ವೀಕರಿಸಿದ. ಇದನ್ನೇ ನಾನು ಹೇಳಿರುವುದು — ಶ್ರೀರಾಮಕೃಷ್ಣರ ಕಾಲದಲ್ಲಿ ಯಾವ ಕಾರ್ಯ ನಡೆದಿರಲಿಲ್ಲವೋ, ಅದು ಶ್ರೀಮಾತೆಯವರ ಮೂಲಕ ಮಾಡಲ್ಪಟ್ಟಿತು. ಧರ್ಮತ್ಯಾಗ ಮಾಡಿದವನನ್ನು ಶ್ರೀಮಾತೆ ಮತ್ತೆ ಸ್ವಧರ್ಮದಲ್ಲಿ ಪ್ರತಿಷ್ಠಾಪಿಸಿದರು. ಮನೆಯ ಹುಡುಗ ಆಟವಾಡುವಾಗ ಧೂಳಿನಲ್ಲಿ ಮುಳುಗಿ ಹೋಗಿದ್ದ ; ಈಗ ಶ್ರೀಮಾತೆಯವರ ಕೃಪೆಯಿಂದ ಅವನು ಮನೆಗೆ ಮರಳಿದ. ಶ್ರೀರಾಮಕೃಷ್ಣರೇ ಎಲ್ಲವನ್ನೂ ಮಾಡಿಸಿದರು.

ಶ್ರೀಮಾತೆಯವರ ಸಾನ್ನಿಧ್ಯದಲ್ಲಿ ಈ ಬಾರಿ ಸರಸ್ವತೀ ಪೂಜೆ ಅತ್ಯಂತ ವೈಭವದಿಂದ ನಡೆಯಿತು. ಪೂಜೆಯ ದಿನ ರಾತ್ರಿ ಒಡಿಯಾ ಭಾಷೆಯ ಜಾತ್ರೆ (ನಾಟಕ) ನಡೆಯಿತು. ಇಬ್ಬರು ಹುಡುಗರು ಶ್ರೀಕೃಷ್ಣ ಹಾಗೂ ರಾಧೆಯ ಪಾತ್ರ ವಹಿಸಿದ್ದರು. ಇಂಥ ಅಪೂರ್ವ ನಾಟಕವನ್ನು ನನ್ನ ಜೀವನದಲ್ಲಿ ಇದೇ ಮೊದಲ ಬಾರಿಗೆ ನೋಡಿದ್ದೆ. ಇಡೀ ನಾಟಕದಲ್ಲಿ ಒಂದೇ ಒಂದು ಮಾತಿಲ್ಲ — ನೃತ್ಯ ಹಾಗೂ ಸಂಗೀತವೇ ಉದ್ದಕ್ಕೂ ಅಭಿನಯಿಸಲ್ಪಟ್ಟಿತು. ನಿಜವಾಗಿಯೂ ಆ ನೃತ್ಯವನ್ನು ಮತ್ತೆ ಮತ್ತೆ ನೋಡಬೇಕಾದದ್ದೆ. ಪಾಶ್ಚಾತ್ಯ ನೃತ್ಯವನ್ನು ಥಿಯೇಟರ್(ರಂಗಭೂಮಿ)ಗಳಲ್ಲಿ ಮೊದಲಿನಿಂದಲೇ ಹಲವು ಬಾರಿ ನೋಡಿ ನಮಗೆ ಅಭ್ಯಾಸವಿದೆ; ಆದರೆ ಇಲ್ಲಿ ಸಂಪೂರ್ಣವಾಗಿ ಪ್ರಾಚ್ಯಕಲೆಯೇ ಎದ್ದು ಕಾಣಿಸುತ್ತಿತ್ತು. ಇಡೀ ದೇಹದ ಅಂಗಾಂಗಳ ವಿವಿಧ ಚಲನೆಗಳಿಂದ ಎಂಥ ನೃತ್ಯ

ವನ್ನು ಮಾಡಿದ್ದರೆಂದರೆ, ಅದರಿಂದ ವಿಶೇಷ ವ್ಯಾಯಾಮ ಹಾಗೂ ಶ್ರಮವಾಗುತ್ತಿತ್ತು; ಸರ್ವಾಂಗ ಸುಂದರವಾದ ರೀತಿಯಲ್ಲಿ ಹಾಗೂ ನಯನಮನೋಹರವೆನ್ನುವಂತೆ ಅಭಿವ್ಯಕ್ತವಾಗಿತ್ತು. ಅದನ್ನು ನೋಡದಿದ್ದವರಿಗೆ ಇವೆಲ್ಲ ಅರ್ಥವಾಗದು. ನಮಗೆ ಕಾತರತೆ ಹೆಚ್ಚುತ್ತಲೇ ಹೋಗುವುದು, ಕೊನೆಯವರೆಗೂ ನೋಡಿದಾಗ ಅತ್ಯಾಶ್ಚರ್ಯವಾಗುವುದು. ಹೀಗೆ ಇಡೀ ರಾತ್ರಿ ವ್ಯಾಪಿಸಿ ಕೊಂಡಿರುವ ಈ ಶ್ರಮದಾಯಕವಾದ ಈ ನಾಟಕವನ್ನು ಇಬ್ಬರು ಚಿಕ್ಕ ಬಾಲಕರು ಆಡಿ ತೋರಿಸಲು ಸಾಧ್ಯವೇ — ಎಂದು! ಅದು ಎಷ್ಟೊಂದು ಪ್ರಭಾವಶಾಲಿಯಾಗಿತ್ತು ಎಂದರೆ, ಇಂದಿನವರೆಗೂ ನಮ್ಮ ಮನಸ್ಸಿನಲ್ಲಿ ಅವರ ನೃತ್ಯ ಹಾಗೂ ಸಂಗೀತದ ಆ ಸಾಲುಗಳು ಚಿರಮುದ್ರಿತವಾಗಿವೆ. ಅದನ್ನು ನೋಡಿ ಶ್ರೀಮಾತೆಯವರು ಸರಸ್ವತೀಪೂಜೆಯ ಪ್ರಾಚೀನ ಪದ್ಧತಿಯನ್ನು ಬದಲಾಯಿಸಿ, ಪೂಜೆಯನ್ನು ಎರಡು ದಿನಕ್ಕೆ ವಿಸ್ತರಿಸಿ, ಮೂರನೇ ದಿನ ವಿಸರ್ಜನೆಯ ನವವಿಧಿಯನ್ನು ಮಾಡುವ ಪದ್ಧತಿಯನ್ನು ಆರಂಭಿಸಿದರು. ಎರಡನೇ ರಾತ್ರಿ ಕೂಡ ಅದೇ ಜಾತ್ರೆಯನ್ನು ಮತ್ತೆ ಆಡಿ ತೋರಿಸುವಂತೆ ಶ್ರೀಮಾತೆ ಆದೇಶಿಸಿದರು.

ಇಲ್ಲಿ ಹೇಳಿದ ನಾಟಕದ ಮೊದಲ ಸಾಲು ಶ್ರೀಮಾತೆಯವರ ಮನಸ್ಸನ್ನು ಎಷ್ಟೊಂದು ಸೂರೆಗೊಂಡಿತು ಹಾಗೂ ಅದರ ಅಭಿನಯವನ್ನು ನೋಡಿ ಅವರು ಎಷ್ಟೊಂದು ತಲ್ಲೀನರಾಗಿಬಿಟ್ಟರು ಎಂದರೆ, ಅವರ ಆದೇಶದಂತೆ ಅದನ್ನೇ ಮತ್ತೆ ಮತ್ತೆ ಅಭಿನಯಿಸಿ ತೋರಿಸಲಾಯಿತು. ಮುಂದೆ ಆ ಸಾಲನ್ನು ಅವರೇ ಹಲವು ಬಾರಿ ಮೆಲುದನಿಯಲ್ಲಿ ಹಾಡಿಕೊಳ್ಳುತ್ತಿದ್ದುದನ್ನು ನಾವು ಕೇಳಿದ್ದೇವೆ. ಆ ಸಾಲುಗಳು ಹೀಗಿವೆ:

**'ಕೋಡ್ ಕೊರಿಲಾ ರಾ ನಂದರ್ ಟೀಕಾ ಪಿಲಾಟಿ!'**

(ಒಡಿಯಾ) ಅದರ ಅನುವಾದ ಮಾಡಿದರೆ ಅರ್ಥ ಹೀಗಾಗುತ್ತದೆ:

'ಏನು ಮಾಡಿದನೊ, ನಂದನ ಚಿಕ್ಕ ಮಗುವೀತ!'

ವಿಸರ್ಜನೆಗಾಗಿ ಸರಸ್ವತಿಯ ಪ್ರತಿಮೆಯನ್ನು ಮೆರವಣಿಗೆಯೊಂದಿಗೆ ಕೊಂಡೊಯ್ಯಲಾಯಿತು. ಆ ಮೆರವಣಿಗೆಯಲ್ಲಿ ಬಡವ-ಶ್ರೀಮಂತ, ಸಾಧು-ಅಸಾಧು, ತ್ಯಾಗಿ-ಗೃಹಸ್ಥ, ವೃದ್ಧ-ಬಾಲಕರು ಎಲ್ಲರೂ ಪ್ರತಿಮೆಯ ತಳದಲ್ಲಿ ಒಟ್ಟು ಸೇರಿ, ಏಕತಾನದಲ್ಲಿ ಹಾಡತೊಡಗಿದರು:

ಶ್ರೀದುರ್ಗಾ ನಾಮ್ ಭೂಲೋ ನಾ,
ಭೂಲೋನಾ ರೇ ಮನ್, ಭೂಲೋ ನಾ ।
ಶ್ರೀ ದುರ್ಗಾ ಸ್ಮರಣೇ, ಸಮುದ್ರಮಂಥನೇ,
ವಿಷಪಾನೇ ವಿಶ್ವನಾಥ್ ಮಲೊನಾ ॥

*(ಮರೆಯದಿರು ಶ್ರೀ ದುರ್ಗೆಯ ನಾಮವನು,*
*ಮರೆಯದಿರು ಮರೆಯದಿರು ಮನವೇ ।*
*ಸಮುದ್ರವನು ಕಡೆವಾಗ ಶ್ರೀದುರ್ಗಾ ಸ್ಮರಣೆಯಲಿ*
*ವಿಷ ಕುಡಿದ ವಿಶ್ವನಾಥನೆ ಸಾಯಲಿಲ್ಲ ॥)*

ರಾಮನ ದೊಡ್ಡ ಕೆರೆಯಲ್ಲಿ ದೇವಿಯ ವಿಸರ್ಜನೆಯಾಯಿತು. ಶ್ರೀಮಾತೆ ಅಲ್ಲಿ ತಂಗಿದ್ದ ಸಮಯದಲ್ಲಿ ರಾಮನ ಅತಿಥಿಶಾಲೆಯಲ್ಲಿ ಅತಿಥಿಗಳ ಸಂಖ್ಯೆ ಹೆಚ್ಚಾಗಿದ್ದಿರಬೇಕು. ಎಲ್ಲೆಡೆ ಆನಂದದ ಗದ್ದಲ ಹೆಚ್ಚಿದ್ದುದರಿಂದ, ಹಳ್ಳಿಗಳೆಲ್ಲ ಪಟ್ಟಣದಂತೆ ಯಾವಾಗಲೂ ಚಟುವಟಿಕೆಯಿಂದ ಕೂಡಿದ್ದವು. ಕಿಟಕಿಮಹಲಿನಲ್ಲಿ ನಾನು ಶ್ರೀಮಾತೆಯವರೊಂದಿಗೆ ಕುಳಿತು, ಎರಡು ಹೊತ್ತು ಮಾತುಕತೆಯಾಡುತ್ತಿದ್ದೆ ಎಂದು ಈಗಾಗಲೇ ಹೇಳಿದೆ. ಮಾತುಕತೆ ನಾನಾ ಬಗೆಯ ವಿಷಯಗಳನ್ನು ಕುರಿತು ನಡೆಯಿತು. ಒಂದು ದಿನ ತೀರ್ಥಯಾತ್ರೆಯ ವಿಷಯವಾಗಿ ಮಾತುಕತೆ ನಡೆಯಿತು. ನನಗೆ ಎಷ್ಟು ಧಾಮಗಳ ದರ್ಶನ ಮಾಡುವ ಭಾಗ್ಯ ದೊರಕಿದೆ ಯೆಂದು ಅವರು ಕೇಳಿದರು. ಬದರಿಕಾಶ್ರಮ ಹಾಗೂ ಪುರಿ — ಈ ಎರಡು ಧಾಮಗಳ ದರ್ಶನವಾಗಿದೆಯೆಂದು ನಾನು ಉತ್ತರಿ ಸಿದೆ. ಆಗ ಶ್ರೀಮಾತೆ ಮತ್ತೆ ಕೇಳಿದರು, ''ಹಾಗಿದ್ದರೆ ಇನ್ನು ಯಾವ ಧಾಮಗಳು ಉಳಿದಿವೆ?'' ನಾನೆಂದೆ, ''ದ್ವಾರಕೆ ಹಾಗೂ ರಾಮೇಶ್ವರ - ರಾಮೇಶ್ವರ ಇದೇ ದಾರಿಯಲ್ಲಿದೆ.'' ಅದನ್ನು ಕೇಳಿದ ಶ್ರೀಮಾತೆ, ರಾಮೇಶ್ವರ ಎಷ್ಟು ದೂರ, ಅಲ್ಲಿಗೆ ಹೋಗಲು ಎಷ್ಟು ದಿನ ಬೇಕಾಗಬಹುದು ಎಂದೆಲ್ಲ ಕೇಳಿ ತಿಳಿದುಕೊಂಡರು.

ಅವರ ಪ್ರಶ್ನೆಯಿಂದ, ರಾಮೇಶ್ವರಕ್ಕೆ ಹೋಗಲು ಅವರು ಆಸಕ್ತರಾಗಿದ್ದಾರೆ ಎಂದು ತಿಳಿದು ನಾನು ಹೇಳಿದೆ, ''ಅಮ್ಮಾ, ಹೋಗುವುದಿದ್ದರೆ ಹೇಳಿಬಿಡಿ. ಮದ್ರಾಸಿನಲ್ಲಿ (ಇಂದಿನ ಚೆನ್ನೈ) ಶಶಿ ಮಹಾರಾಜ್ (ಸ್ವಾಮಿ ರಾಮಕೃಷ್ಣಾನಂದರು) ಇದ್ದಾರಲ್ಲ. ಅವರು ಎಲ್ಲ ವ್ಯವಸ್ಥೆಯನ್ನೂ ಮಾಡಿಬಿಡುತ್ತಾರೆ.'' ಅದಕ್ಕೆ ಶ್ರೀಮಾತೆ, ''ನೀನು ಹೇಳಿದ್ದು ಸರಿ, ಮಗೂ; ನನ್ನ ಮಾವ ಅಲ್ಲಿಗೆ ಹೋಗಿದ್ದರು. ಅಲ್ಲಿಂದ ಅವರು ರಾಮಶಿಲೆಯನ್ನು ತಂದಿದ್ದರು. ಕಾಮಾರಪುಕುರದಲ್ಲಿ ನೋಡಿದ್ದೀಯಲ್ಲ, ಈಗಲೂ ಅಲ್ಲಿ ಅದಕ್ಕೆ ಪೂಜೆ ನಡೆಯುತ್ತಿದೆ. ನಾನು ಅಲ್ಲಿಗೆ ಹೋಗುತ್ತೇನೆ'' ಎಂದರು.

ಹೀಗೆ ನಿರ್ಧಾರವಾಯಿತು; ಶರತ್ ಮಹಾರಾಜರಿಗೆ ಹಾಗೂ ಶಶಿ ಮಹಾರಾಜರಿಗೆ ಪತ್ರ ಕಳುಹಿಸಲಾಯಿತು. ಅಲ್ಲಿಗೆ ಹೋಗುವುದು ಸಂಪೂರ್ಣ ನಿರ್ಧಾರವಾದ ಮೇಲೆ, ಶ್ರೀಮಾತೆಯವರ ಆದೇಶದಂತೆ ನಾನು ಜಯರಾಮಬಾಟಿಗೆ ಹೋಗಿ ಸಣ್ಣತ್ತೆ (ರಾಧುವಿನ ತಾಯಿ)ಯನ್ನು ಕರೆದುಕೊಂಡು ಬರಬೇಕಾಗಿತ್ತು. ಕೊತಾರ್‌ನಿಂದ ಅವರನ್ನು ಜಯರಾಮಬಾಟಿಗೆ ಕರೆದುಕೊಂಡು ಹೋಗಿ, ಬಿಟ್ಟು ಬಂದಿದ್ದೆ ; ಈಗ ರಾಮೇಶ್ವರಕ್ಕೆ ಹೋಗುವ ಸಲುವಾಗಿ ಅವರನ್ನು ಕರೆದುಕೊಂಡು ಬಂದೆ.

ರಾಮನ ತಾಯಿ ಹಾಗೂ ನಿತಾಯಿಯ ತಾಯಿ ನಮ್ಮೊಂದಿಗೆ ಹೊರಟರು. ಎಲ್ಲರೂ ಸರಿಯಾದ ಸಮಯಕ್ಕೆ ಭದ್ರಕ್‌ಗೆ ಹೋದೆವು. ರಾಮನು ಪುರಿಗೆ ಹೋಗುವುದಾಗಿ ಹೇಳಿ ತಾನು ಅಲ್ಲಿಗೆ ಒಂದು ಟಿಕೆಟ್ ಕೊಂಡುಕೊಂಡ. ಶುಕುಲ್ ಮಹಾರಾಜ್, ಕೃಷ್ಣಲಾಲ್ ಹಾಗೂ ನನಗೋಸ್ಕರ ಮೂರು ಇಂಟರ್‌ಕ್ಲಾಸ್ ಟಿಕೆಟನ್ನು ಮದ್ರಾಸ್ ತನಕ ಖರೀದಿಸಲಾಯಿತು. ಶ್ರೀಮಾತೆ,

ಸಣ್ಣತ್ತೆ, ಗೋಲಾಪ್ ಮಾ, ರಾಮನ ತಾಯಿ ಹಾಗೂ ನಿತಾಯಿಯ ತಾಯಿ — ಇವರು ಐವರಿಗೆ ಐದು ಸೆಕೆಂಡ್ ಕ್ಲಾಸ್ ಟಿಕೆಟ್ ಮಾಡಿಸಿದರು. ರಾಧುಗೆ ಟಿಕೆಟ್ ಬೇಕಿರಲಿಲ್ಲ.

ಶ್ರೀಮಾತೆಯವರೊಂದಿಗೆ ರಾಮೇಶ್ವರಕ್ಕೆ ಯಾರೆಲ್ಲ ಹೋಗಿದ್ದರೋ ಅವರ ಹೆಸರನ್ನೆಲ್ಲ ಇಲ್ಲಿ ಉಲ್ಲೇಖಿಸಿದ್ದೇನೆ. ನಾನು ಸುರಕ್ಷಿತವಾಗಿ ಇಟ್ಟುಕೊಂಡಿದ್ದ ನೋಟ್ಸಿನಿಂದ ಮತ್ತು ನನ್ನ ನೆನಪಿನಿಂದ ಅದನ್ನಿಲ್ಲಿ ಕೊಟ್ಟಿದ್ದೇನೆ.

ಸರಿಯಾದ ಸಮಯಕ್ಕೆ ಭದ್ರಕ್‌ನಿಂದ ಮದ್ರಾಸ್ ಮೇಲ್ ಹೊರಟಿತು. ರಾಮೇಶ್ವರ-ಯಾತ್ರೆಯನ್ನು ಕುರಿತು ಹೇಳಲು ಆರಂಭಿಸುವಾಗ ನೆನಪಾಯಿತು, ಕೊತಾರ್‌ನಲ್ಲಿ ಇದ್ದ ಎಲ್ಲ ದಿನಗಳ ಘಟನೆಗಳನ್ನು ಹೇಳಿದ್ದೇನೊ ಇಲ್ಲವೋ; ಇನ್ನೊಂದು ಬಾರಿ ನೋಡುತ್ತೇನೆ. ಗಮನಿಸಿ ನೋಡಿದಾಗ ತಿಳಿಯಿತು, ಒಂದು ದಿನದ ಘಟನೆಯನ್ನು ಇಲ್ಲಿ ವರ್ಣಿಸಲಾಗಿಲ್ಲ. ಆದ್ದರಿಂದ, ಇದು ಸರಿಯಾದ ಜಾಗವಲ್ಲದಿದ್ದರೂ, ಅದನ್ನು ಇಲ್ಲೇ ಹೇಳಿಬಿಡುತ್ತೇನೆ :

ಸರಸ್ವತೀಪೂಜೆ ಮುಗಿದಿತ್ತು. ಅಂದು ಮಂಗಳವಾರ; ಹೊತ್ತು ಸಾಯಂಕಾಲ. ಇಂದು ನನ್ನ ಪಾಲಿಗೆ ಶ್ರೀಮಾತೆಯವರ ಒಡನಾಟದಲ್ಲಿ ಅತ್ಯಂತ ಸ್ಮರಣಾರ್ಹವಾದ ದಿನ. ಕಿಟಕಿಮಹಲ್‌ಗೆ ಹೋಗಿ ನೋಡಿದೆ, ಶ್ರೀಮಾತೆ ಈಗಾಗಲೇ ಧ್ಯಾನಕ್ಕೆ ಕುಳಿತಿದ್ದರು. ನಾನು ಬಂದುದು ಅವರಿಗೆ ಗೊತ್ತಾಗಲಿಲ್ಲ ಎಂದು ನನಗೆ ತಿಳಿಯಿತು. ಆದರೂ ನನಗೆ ಸಂದೇಹ; ಸುಮ್ಮನೆ ಅಲ್ಲೇ ನಿಂತೆ. ಅಲ್ಲೇ ಕಾಯತೊಡಗಿದೆ. ಸ್ವಲ್ಪ ಹೊತಿನಲ್ಲೇ ಅವರು ನನ್ನತ್ತ ನೋಡುತ್ತಾರೆ ಹಾಗೂ ಮಾತನಾಡುತ್ತಾರೆ ಎಂದು ಭಾವಿಸಿದೆ. ಆದರೆ ಹಾಗೇನೂ ಕಂಡು ಬರಲಿಲ್ಲ. ಇನ್ನೂ ನಾನು ಕಾಯುತ್ತಲೇ ನಿಂತಿದ್ದೆ. ವಾತದ ತೊಂದರೆಯಿಂದ ಅವರು ಕಾಲುಚಾಚಿ ಕುಳಿತಿದ್ದರು, ನಿಜ; ಆದರೆ ಅವರ ದೇಹ ನೇರವಾಗಿತ್ತು. ಎರಡು ಕಣ್ಣುಗಳೂ ತೆರೆದಿದ್ದರೂ, ಅವುಗಳಲ್ಲಿ ಬಾಹ್ಯದೃಷ್ಟಿ ಇರಲಿಲ್ಲ. ಅವರ ಭಾವಕ್ಕೆ ವಿಘ್ನ ತಾರದೆ ನಾನು ಹಾಗೆಯೇ ಕಾಯುತ್ತ ನಿಂತೆ; ಅವರ ಮುಖದ ಕಾಂತಿಯನ್ನೇ ನಾನು ಎವೆಯಿಕ್ಕದೆ ನೋಡತೊಡಗಿದೆ. ಸುಮಾರು ಹತ್ತು-ಹದಿನೈದು ನಿಮಿಷಗಳ ಕಾಲ ಕಾದ ನಂತರ ಅವರು ಕೇಳಿದರು, ''ಎಷ್ಟು ಹೊತ್ತಿಗೆ ಬಂದೆ?'' ನಾನೆಂದೆ, ''ಹೆಚ್ಚು ಹೊತ್ತಾಗಿಲ್ಲ, ನೀವು ಎಷ್ಟು ಹೊತ್ತಿನಿಂದ ಇಲ್ಲಿದ್ದೀರಿ, ಅಮ್ಮಾ?'' ''ಬಂಧನದಲ್ಲಿ ಇರುವುದು ಚೆನ್ನಾಗಿರುವುದಿಲ್ಲ— ಅದಕ್ಕಾಗಿಯೇ ಮಧ್ಯಾಹ್ನದ ಹೊತ್ತು ಅವರೆಲ್ಲ ನಿದ್ರಿಸುತ್ತಿದ್ದಾಗ ನಾನು ಹೊರಬಂದು ಏಕಾಂತದಲ್ಲಿ ಕುಳಿತುಬಿಟ್ಟೆ.''

ಅವರು ಹೀಗೆ ಹೇಳಿದಾಗ ನೆನಪಾಯಿತು, 'ಚೆನ್ನಾಗಿರುವುದಿಲ್ಲ' ಎಂದು ಹೇಳಿದ್ದರೂ ಕೂಡ, ಕಲ್ಕತ್ತೆಯಲ್ಲಿ ಬಾಡಿಗೆಯ ಮನೆಯಲ್ಲಿದ್ದಾಗಲೂ ಅಥವಾ ತಮ್ಮದೇ 'ಉದ್ಬೋಧನ'ದಲ್ಲಿದ್ದಾಗಲೂ ಅವರು ನಡುನಡುವೆ ತಾರಸಿ ಮೇಲೆ ಹೋಗಿ ಒಬ್ಬಂಟಿಯಾಗಿ ಕುಳಿತುಬಿಡುತ್ತಿದ್ದರು.

ಶ್ರೀಮಾತೆ ಹೇಳುತ್ತಾ ಹೋದರು. ಅವರು ಯಾವ ರೀತಿ ಹೇಳತೊಡಗಿದರು ಎಂಬುದನ್ನು ನಾನು ವರ್ಣಿಸಲಾರೆ. ಏಕೆಂದರೆ, ನಮ್ಮ ತಿಳಿವಳಿಕೆ ಭ್ರಾಂತಿಮೂಲವಾದದ್ದು. ಅವರನ್ನು ನಾವು ಯಾವ ರೀತಿ ತಿಳಿದುಕೊಳ್ಳುವೆವು? ಕೇವಲ ಅವರ ಮಾತುಗಳನ್ನು ಮಾತ್ರ ಯಥಾವತ್ತಾಗಿ ನೀಡುತ್ತೇನೆ.

ಶ್ರೀಮಾತೆ ಹೇಳತೊಡಗಿದರು: ''ಮತ್ತೆ ಮತ್ತೆ ಬರುವುದು - ಇದರಿಂದ ಬಿಡುಗಡೆಯಿಲ್ಲವೆ? ಎಲ್ಲಿ ಶಿವನಿರುತ್ತಾನೋ ಅಲ್ಲಿ ಶಕ್ತಿ; ಶಿವ ಹಾಗೂ ಶಕ್ತಿ ಒಂದೆಡೆ. ಮತ್ತೆ ಮತ್ತೆ ಅದೇ ಶಿವ, ಅದೇ ಶಕ್ತಿ. ಬಿಡುಗಡೆಯೇ ಇಲ್ಲ. ಆದರೂ ಜನರಿಗೆ ತಿಳಿಯುವುದಿಲ್ಲ. ಅವರಿಗಾಗಿ ಠಾಕುರ್ ಎಷ್ಟೊಂದು ಕಷ್ಟ ಅನುಭವಿಸುತ್ತಾರೆ! ಏನು ಈ ತಪಸ್ಸುಗಳೆಲ್ಲ? ತಪಸ್ಸಿನ ಅಗತ್ಯವೇನಿದೆ? ಆದರೂ ತಪಸ್ಸು ಕೇವಲ ಜನರ ಸಲುವಾಗಿ. ಜನರಿಗೆ ಏನು ಸಾಧ್ಯವಿದೆ? ಅವರಿಗೆ ಚೈತನ್ಯವೆಲ್ಲಿ, ಶಕ್ತಿಯೆಲ್ಲಿ? ಆದ್ದರಿಂದಲೇ ಠಾಕೂರರು ಎಲ್ಲವನ್ನೂ ಮಾಡಬೇಕಾಯಿತು. ಕಾಂಕುರಗಾಛಿಯಲ್ಲಿ ಹಾಡುವ ಒಂದು ಹಾಡು ಗೊತ್ತೆ?''

**ನಾನು :** ಯಾವ ಹಾಡಮ್ಮಾ?

**ಶ್ರೀಮಾತೆ :** '**ಏಶೇಛೇ ಕಾಂಗಾಲೇರ್ ಠಾಕೂರ್ ಕಾಂಗಾಲೇರ್ ತರೇ**' (ದೀನರ ದೇವ ನೀ ಬಂದೆ, ದೀನರ ದಾಟಿಸಲು) ನಿಜವಾಗಿಯೂ ಮಕ್ಕಳೆಲ್ಲ ನನ್ನ ದೀನ ಮಕ್ಕಳು. ಒಂದು ಬಾರಿ ಅವರು 'ಅಮ್ಮಾ' ಅಂತ ಕರೆದರೆ ನನಗೆ ಸುಮ್ಮನಿರಲಾಗುವುದೆ? ಅದೇ ರೀತಿ ಠಾಕೂರರೂ ಬರಬೇಕಾಗುವುದು.

**ನಾನು :** ಚೈತನ್ಯದೇವರೂ ಇದೇ ಠಾಕೂರರೇನು?

**ಶ್ರೀಮಾತೆ :** ಹೌದು, ಹೌದು. ಇದೇ ಠಾಕೂರ್ ಮತ್ತೆ ಮತ್ತೆ ಬರುತ್ತಾರೆ, ಒಂದೇ ಚಂದ್ರ ಪ್ರತಿದಿನವೂ ಬರುವಂತೆ. ಬಿಡುಗಡೆಯಿಲ್ಲ - ಬಂಧಿಸಲ್ಪಟ್ಟಿದ್ದಾರೆ. ಜೀವಗಳೆಲ್ಲ ಅವರಿಗೇ ಸೇರಿವೆ. ಅವರು ನೋಡಿಕೊಳ್ಳದಿದ್ದರೆ ಇನ್ನಾರು ನೋಡುತ್ತಾರೆ? ಬೇರೆ ಊರಿನ ಜನ ಬರುವರೆ? ಅವರು ಹೇಳಿದ್ದಾರೆ, 'ಜೊಖೊನಿ ಡಾಕ್‌ಬಿ ಮೋರೇ, ಏಶೇ ದೇಖಾ ದಿಬೊ ತೋರೇ' ಅಂತ. ('ಎಂದು ಕರೆಯುವೆ ನನ್ನ, ಬಂದು ತೋರುವೆ ನಿನಗೆ') ಇದನ್ನು ಮನಸ್ಸಿನಲ್ಲಿ ಇಟ್ಟುಕೋ-ಯಾವತ್ತೂ ಮರೆಯಬೇಡ. ಕರೆದರೆ ಸಾಕು, ಪಡೆಯುವೆ. **ಅವರು ಕಲ್ಪತರು** ತಾನೆ!

**ನಾನು :** ನನಗೆ ನನ್ನ ತಾಯಿ ಗೊತ್ತು.

**ಶ್ರೀಮಾತೆ :** ಠಾಕೂರೇ 'ತಾಯಿ' ಅಂತ ಹೇಳಲು ಕಲಿಸಿದ್ದಾರೆ. ಮತ್ತೆ 'ತಾಯಿ' ಎನ್ನುವುದೇನಿದೆ? ಅವರದೇ ಸೃಷ್ಟಿ, ಅವರೇ ಜನ್ಮ ಕೊಡುತ್ತಾರೆ, ಅನಂತರ ಅವರೇ ನುಂಗಿಬಿಡುತ್ತಾರೆ. ನುಂಗಿಬಿಡುತ್ತಾರೆ, ಅಂದರೇನು? ಮುಕ್ತಿ ನೀಡುತ್ತಾರೆ ಅಂತ. ಅವರದೇ ಲೀಲೆ, ಅವರದೇ ಆಟ! *(ಮುಂದುವರಿಯುವುದು)*

# ದೈನಂದಿನ ಜೀವನದಲ್ಲಿ ಯೋಗ !

ಸ್ವಾಮಿ ರಾಘವೇಶಾನಂದ

ಯೋಗವೆಂದರೆ ಅದು ಆಧ್ಯಾತ್ಮಿಕ ಸಾಧನೆ – ಸಾಕ್ಷಾತ್ಕಾರಕ್ಕೆ ಅಗತ್ಯವಾದ ಮಾರ್ಗ. 'ಯೋಗ'ದ ಸರಳ ವಿವರಣೆಯೊಂದಿಗೆ ಅದರ ಅರ್ಥ ವಿಸ್ತಾರ, ಬಗೆಗಳು ಹಾಗೂ ವಿಧಾನ ಇವನ್ನು ಇಲ್ಲಿ ದಿವ್ಯತ್ರಯರ ಜೀವನ, ಉಪದೇಶಗಳ ಹಿನ್ನೆಲೆಯಲ್ಲಿ ವಿವರಿಸಲಾಗಿದೆ. ಲೇಖಕರು ಉದಕ ಮಂಡಲ ರಾಮಕೃಷ್ಣ ಮಠದ ಅಧ್ಯಕ್ಷರು. ಅನೇಕ ಗ್ರಂಥಗಳನ್ನು ರಚಿಸಿರುವ ಪೂಜ್ಯರ ಹಲವು ಲೇಖನಗಳು ಈ ಪತ್ರಿಕೆಯಲ್ಲಿ ಪ್ರಕಟವಾಗಿವೆ.

'ದೈನಂದಿನ ಜೀವನ' ಎಂದರೇನು ಎಂದು ಎಲ್ಲರಿಗೂ ಗೊತ್ತೇ ಇದೆ. ಆದರೆ 'ಯೋಗ' ಎಂಬ ಶಬ್ದ ಮಾತ್ರ ಅನೇಕರಿಗೆ ಹೊಸತು. ಅಥವಾ ಕೆಲವರಿಗೆ ಅದರ ಪರಿಚಯವಿರಲೂಬಹುದು. ಏಕೆಂದರೆ, ಇಂದು ಯೋಗಾಸನಗಳು ಬಹಳ ಪ್ರಚಲಿತವಾಗುತ್ತಿವೆ. ಅದೊಂದು ಬಗೆಯ ಜನಾಕರ್ಷಣೆಯೇ ಆಗಿದೆ ಎಂದರೂ ಅತಿಶಯೋಕ್ತಿಯೇನಲ್ಲ. ಆ ಯೋಗಾಸನಗಳನ್ನೇ ಸಾಮಾನ್ಯ ಜನರು 'ಯೋಗ' ಎಂದು ಕರೆಯುವುದೂ ಉಂಟು. ಆದರೆ ಈ ಲೇಖನ ಪ್ರಸ್ತಾಪಿಸುವುದು ಕೇವಲ ಶಾರೀರಿಕ ಯೋಗಾಸನಗಳನ್ನು ಕುರಿತಾಗಿ ಅಲ್ಲ. ಬದಲಾಗಿ, ಶರೀರ-ಮನಸ್ಸು-ಬುದ್ಧಿ-ಜೀವ ಇವೆಲ್ಲವನ್ನೂ ವಿಕಾಸಗೊಳಿಸಬಲ್ಲ ಯೋಗವನ್ನು ಕುರಿತಾಗಿ! ಹಾಗಾದರೆ ಇಲ್ಲಿ 'ಯೋಗ' ಎಂದರೇನು?

'ಯೋಗ' ಎಂಬ ಶಬ್ದವು 'ಯುಜಿರ್-ಯೋಗೇ' ಎಂಬ ಸಂಸ್ಕೃತ ಧಾತುವಿನಿಂದ ಉಂಟಾಗಿದೆ. ಈ ಧಾತುವಿಗೆ 'ಸೇರಿಸುವುದು' ಎಂದರ್ಥ. ಯಾವುದನ್ನು ಸೇರಿಸುವುದು? ಜೀವಾತ್ಮನನ್ನು ಸೇರಿಸುವುದು. ಯಾವುದರೊಡನೆ ಸೇರಿಸುವುದು? ಪರಮಾತ್ಮನೊಡನೆ ಸೇರಿಸುವುದು. ಯಾವುದಕ್ಕೋಸ್ಕರ ಸೇರಿಸುವುದು? ಆನಂದವನ್ನು ಪಡೆಯುವುದಕ್ಕೋಸ್ಕರ! ಆದ್ದರಿಂದ, ಒಟ್ಟಾಗಿ ಹೇಳುವುದಾದರೆ, ಆನಂದವನ್ನು ಪಡೆಯುವುದಕ್ಕಾಗಿ ಪರಮಾತ್ಮನೊಡನೆ ಜೀವಾತ್ಮನನ್ನು ಸೇರಿಸುವುದೇ ಯೋಗ! ಆದರೆ, 'ಪರಮಾತ್ಮ' 'ಜೀವಾತ್ಮ' ಇತ್ಯಾದಿ ಶಬ್ದಗಳನ್ನು ಕೇಳಿದ ಕೂಡಲೇ ಆಧುನಿಕ ಜನರು – 'ಅಯ್ಯೋ... ಇವೆಲ್ಲ ತಪಸ್ವಿಗಳಿಗೆ, ಸಂನ್ಯಾಸಿಗಳಿಗೆ ಸಂಬಂಧಿಸಿದ ವಿಚಾರವಲ್ಲವೆ? ಇಂದಿನ ವೇಗಯುತ ಬಾಳ್ವೆಯಲ್ಲಿ ವೇದಾಂತಕ್ಕೆಲ್ಲ ಸಮಯವೆಲ್ಲಿ?' ಎಂದು ಸುಯಿಲೆಳೆಯುತ್ತಾರೆ. ಆದರೆ ಈ ಹುಚ್ಚೋಟದ ಜೀವನದ ನಡುವೆಯೇ ಯೋಗವನ್ನು ಅಭ್ಯಸಿಸುವುದು ಹೇಗೆ ಎಂಬುದನ್ನು ಗಂಭೀರವಾಗಿ ಪರಾಮರ್ಶಿಸಿ ಪರಿಹಾರವನ್ನು ಕಂಡುಕೊಳ್ಳಬೇಕಾದ ತುರ್ತಿನ ಪರಿಸ್ಥಿತಿ ಇಂದು ಒದಗಿದೆ. ಏಕೆಂದರೆ, ಮನುಷ್ಯ ಎಂತೆಂಥ ಆವಿಷ್ಕಾರಗಳನ್ನೇ ಮಾಡಿದರೂ, ಎಷ್ಟೆಷ್ಟು ಸುಖಭೋಗಗಳನ್ನು ಅನುಭವಿಸಿದರೂ ಶಾಂತಿ-ತೃಪ್ತಿಗಳನ್ನು ಕಾಣದೆ ಬವಣೆಪಡುತ್ತ, ನಾನಾಬಗೆಯ ಮನೋವಿಕಾರಗಳಿಗೆ, ಮನಸ್ತಾಪಗಳಿಗೆ ತುತ್ತಾಗುತ್ತಿದ್ದಾನೆ. ಇಂಥ ಘೋರ ಪರಿಸ್ಥಿತಿಯಿಂದ ಮಾನವನನ್ನು ಪಾರುಗಾಣಿಸಲೆಂದೇ ಋಷಿ-ಮುನಿಗಳು ಯೋಗ ಮಾರ್ಗಗಳನ್ನು ಹಾಕಿಕೊಟ್ಟು ಶಾಶ್ವತ ಶಾಂತಿ-ಆನಂದಗಳ ದಾರಿಯನ್ನು ತೋರಿದರು. ಅದನ್ನೇ, ಅನಂತರ ಬಂದ ಸಾಧು-ಸಂತರು ನವೀಕರಿಸಿ, ಕಾಲೋಚಿತ ಯುಕ್ತಿಗಳನ್ನು ಅಳವಡಿಸಿ, ಜನಮಾನಸಕ್ಕೆ ಶಾಂತಿ-ಆನಂದಗಳನ್ನು ಉಣಿಸಿದರು. ಹಾಗಾದರೆ ಆ ಯೋಗ ಮಾರ್ಗಗಳು ಯಾವುದು? ಇಂದಿಗೆ, ಕಾಲೋಚಿತವಾದ ಯುಕ್ತಿ ಯಾವುದು?

ಶಾಸ್ತ್ರಗಳಲ್ಲಿ ಹತ್ತಾರು ಬಗೆಯ ಯೋಗಮಾರ್ಗಗಳನ್ನು ತಿಳಿಸಲಾಗಿದ್ದರೂ, ಅವುಗಳನ್ನು ನಮ್ಮ ಸೌಕರ್ಯಕ್ಕಾಗಿ ನಾಲ್ಕು ಪ್ರಧಾನ ಮಾರ್ಗಗಳಾಗಿ ವಿಂಗಡಿಸಲಾಗಿದೆ. ಅವು:

೧. ರಾಜಯೋಗ
೨. ಜ್ಞಾನಯೋಗ
೩. ಕರ್ಮಯೋಗ, ಮತ್ತು
೪. ಭಕ್ತಿಯೋಗ

ಮಾನವರ ಸಹಜವಾದ ಒಲವು ಹಾಗೂ ಶರೀರ-ಮನಸ್ಸುಗಳ ಶಕ್ತಿ-ಶುದ್ಧಿಗಳನ್ನು ಗಮನದಲ್ಲಿಟ್ಟುಕೊಂಡು ಈ ನಾಲ್ಕು ವಿಭಾಗಗಳನ್ನು ಮಾಡಲಾಗಿದೆ. ಬಲಿಷ್ಠವೂ, ಶುದ್ಧವೂ ಆದ ಶರೀರ-ಮನಸ್ಸುಗಳುಳ್ಳವರಿಗೆ ರಾಜಯೋಗ. ತೀಕ್ಷ್ಣವಾದ ವಿವೇಕವುಳ್ಳ ವಿಚಾರಶೀಲರಿಗೆ ಜ್ಞಾನಯೋಗ. ಹುಮ್ಮಸ್ಸು ತುಂಬಿದ ಕ್ರಿಯಾಶೀಲರಿಗೆ ಕರ್ಮಯೋಗ. ಭಾವುಕ ಸ್ವಭಾವದವರಿಗೆ ಭಕ್ತಿಯೋಗ. ಇವುಗಳಲ್ಲಿ ಇಂದಿನ ಕಾಲಕ್ಕೆ ಉಚಿತವಾದದ್ದು ಮತ್ತು ಬೇಗನೆ, ಸುಲಭವಾಗಿ ಗುರಿಮುಟ್ಟಿಸಬಲ್ಲದ್ದು ಯಾವುದು ಎಂಬುದನ್ನು ಕಂಡುಕೊಳ್ಳಬೇಕಾದದ್ದು ಮೊದಲ ಕಾರ್ಯ. ಇಲ್ಲೇ ನಮ್ಮ ನೆರವಿಗೆ ಬರುವುದು ಯುಗಪುರುಷರ ಬೋಧನೆ. ಯುಗಾವತಾರರಾದ ಶ್ರೀರಾಮಕೃಷ್ಣರೆನ್ನುತ್ತಾರೆ, ''ಈ ಯುಗದಲ್ಲಿ ಮನುಷ್ಯನ ಜೀವನ ಆಹಾರದ ಮೇಲೆ ನಿಂತಿದೆ. (ಅಂದರೆ ಕಲಬೆರಕೆಯ ಈ ಕಲಿಯುಗದಲ್ಲಿ ಮನುಷ್ಯನ ಶರೀರ-ಮನಸ್ಸುಗಳು ತುಂಬ ದುರ್ಬಲ.) ಕಲಿಯುಗಕ್ಕೆ ಸೂಕ್ತವಾದದ್ದು ಭಕ್ತಿಯೋಗ – ಭಗವಂತನ ನಾಮಗುಣಕೀರ್ತನೆ ಮತ್ತು ಪ್ರಾರ್ಥನೆ. ಭಕ್ತಿಯೋಗವೇ ಯುಗಧರ್ಮ.'' *(ಶ್ರೀರಾಮಕೃಷ್ಣ ವಚನವೇದ, ಸಂ. ೧, ಪು. ೮೪)*

ಹಾಗಾದರೆ, ಭಕ್ತಿಯೋಗ ಎಂದರೇನು? ಭಗವಂತನಲ್ಲಿಡುವ ಪ್ರೀತಿಗೆ ಭಕ್ತಿ ಎಂದು ಹೆಸರು. ಇಂತಹ ಪ್ರೀತಿಯ ನೆರವಿನಿಂದ ಜೀವಾತ್ಮನನ್ನು ಭಗವಂತನೊಡನೆ ಒಂದಾಗಿಸುವಂಥದ್ದೇ ಭಕ್ತಿಯೋಗ. ಇಂದಿನ ಯುಗಕ್ಕೆ ಭಕ್ತಿಯೋಗ ಅತ್ಯಂತ ಸೂಕ್ತ, ಹೇಗೆ? ಮನುಷ್ಯನಲ್ಲಿ ಮಮತೆ-ಪ್ರೀತಿ ಎಂಬುದು ಸಹಜವಾಗಿಯೇ ಇದೆ. ಎಂತಹ ದರೋಡೆಕೋರನಲ್ಲೂ ತನ್ನ ಹೆಂಡತಿ-ಮಕ್ಕಳ ಮೇಲೆ ಪ್ರೀತಿ-ಮಮತೆ ಇರುತ್ತದೆ ಅಲ್ಲವೆ? ಕಡುಲೋಭಿಯಾದವನು ತನ್ನ ಹೆಂಡತಿ-ಮಕ್ಕಳ ವಿಷಯದಲ್ಲಿ ಜುಗ್ಗನಾಗಿದ್ದರೂ, ತನ್ನ ಹಣಕಾಸು, ಆಸ್ತಿ-ಪಾಸ್ತಿಯ ಮೇಲಂತೂ ಇನ್ನಿಲ್ಲದ ಮೋಹ-ಮಮತೆಯನ್ನಿಟ್ಟಿರುತ್ತಾನೆ. ಹೀಗೆ ಮನುಷ್ಯನ ಪ್ರೀತಿಯ ಕೇಂದ್ರಬಿಂದು, ಮೋಹದ ಮಡು ವಿಭಿನ್ನವಾಗಿದ್ದರೂ ಪ್ರತಿಯೊಬ್ಬರಲ್ಲೂ ಪ್ರೀತಿ-ಮಮತೆ ಇರುವುದಂತೂ ದಿಟ. ಹೀಗೆ ಆದಾಗ ತನ್ನಲ್ಲಿ ಇರುವ

ಪ್ರೀತಿ-ಮಮತೆಗಳನ್ನೇ ಭಗವಂತನೆಡೆಗೆ ತಿರುಗಿಸುವ ಸರಳ ಉಪಾಯವೇ ಭಕ್ತಿಯೋಗ! ಆದರೆ ರಾಜಯೋಗ - ಜ್ಞಾನಯೋಗಾದಿಗಳನ್ನು ಅನುಸರಿಸುವುದು ಅಷ್ಟು ಸುಲಭವಲ್ಲ. ಅದಕ್ಕೆ ವಿಶೇಷ ಅರ್ಹತೆ, ಪೂರ್ವತಯಾರಿ ಬೇಕಾಗುತ್ತವೆ. ಉದಾಹರಣೆಗೆ, ಜ್ಞಾನಯೋಗ ಸಾಧನೆಯನ್ನು ಪ್ರವೇಶಿಸುವವನಲ್ಲಿ ವಿವೇಕ, ವೈರಾಗ್ಯ, ಇಂದ್ರಿಯ ನಿಗ್ರಹ - ಮನೋನಿಗ್ರಹ ಇತ್ಯಾದಿ ಗುಣಗಳು, ಮತ್ತು ಮುಮುಕ್ಷುತ್ವ ಇವೆಲ್ಲ ಇರಬೇಕು ಎನ್ನುತ್ತವೆ ಶಾಸ್ತ್ರಗಳು. ಇವೆಲ್ಲ ಇಲ್ಲದಿದ್ದರೆ, ಜ್ಞಾನಯೋಗದ ಪ್ರಾರಂಭಿಕ ಹಂತದ ಬಳಿಯೂ ಸುಳಿಯಲಾಗುವುದಿಲ್ಲ. ಆದರೆ, ಭಕ್ತಿಯೋಗವನ್ನು ಆರಂಭಿಸಲು ಈ ಬಗೆಯ ಯಾವುದೇ ಪೂರ್ವಾರ್ಹತೆ ಬೇಕಿಲ್ಲ. ಸರಳ ವಿಶ್ವಾಸದಿಂದ ನೇರವಾಗಿ ಭಕ್ತಿಯನ್ನು ಅಭ್ಯಸಿಸಲು ಶುರುಮಾಡಿಯೇ ಬಿಡಬಹುದು. ಬಳಿಕ, ಮುಂದುವರಿದಂತೆಲ್ಲ ಆಧ್ಯಾತ್ಮಿಕ ಗುಣ-ಲಕ್ಷಣಗಳು ಸಾಧಕನಲ್ಲಿ ತಾವಾಗಿ ಮೂಡಿಬರುತ್ತವೆ. ಅಷ್ಟೇ ಅಲ್ಲ, ಶ್ರೀರಾಮಕೃಷ್ಣರೆನ್ನುವಂತೆ, ಪ್ರಾಣಾಯಾಮಾದಿ ಕಠಿಣ ಸಾಧನೆಗಳನ್ನು ದೀರ್ಘಕಾಲ ಅಭ್ಯಾಸ ಮಾಡಿದವರಿಗೆ ಮಾತ್ರ ಸಿದ್ಧಿಸುವ ಕುಂಭಕ ಇತ್ಯಾದಿ ಕೂಡ ಭಕ್ತಿಯ ಬಲದಿಂದ ತಾನೇತಾನಾಗಿ ಸಂಭವಿಸುತ್ತವೆ. ಮತ್ತು ಭಕ್ತಿಯೋಗದಲ್ಲಿ ಶಾಸ್ತ್ರಗಳ ವಾದ-ವಿವಾದದ ಗೊಂದಲವಿಲ್ಲ, ಬದಲಾಗಿ ಎಷ್ಟು ಬೇಕಾದರೂ ಭಾವಿಸಲು ಸ್ವಾತಂತ್ರ್ಯವಿದೆ. ಭಾವವೇ ಭಕ್ತಿಸಾಧನೆಯ ಕೀಲಿಕೈ. ಆದ್ದರಿಂದ ಅಲ್ಲಿ ಶುಷ್ಕತೆಗೆ ಅವಕಾಶವಿಲ್ಲ; ಸಾಧನಾವಸ್ಥೆಯಲ್ಲಿಯೂ ಭಾವದ ಆನಂದ ಇರುತ್ತದೆ, ಇನ್ನು ಗುರಿ-ಮುಟ್ಟಿದ ಮೇಲಂತೂ ಆನಂದವೋ ಆನಂದ. ಜನಮನ ಬಯಸುವುದೂ ಇದನ್ನೇ: ಸುಖ-ಸಂತೃಪ್ತಿ-ಆನಂದ!

ಮಾನವನನ್ನು ಸಕಲ ದುಃಖ-ದುರಿತಗಳಿಂದಲೂ ಪಾರುಗಾಣಿಸಿ ಆನಂದವನ್ನು ವರ್ಷಿಸಬಲ್ಲ ಈ ಯೋಗವು ನಿಜಕ್ಕೂ ಒಂದು ವಿಜ್ಞಾನವೇ ಸರಿ. ಇಂತಹ ಯೋಗದ ಪರಿಕಲ್ಪನೆಗಳು ಯಾವುವು? ಭಗವದ್ಗೀತೆಯ ಆರನೇ ಅಧ್ಯಾಯದಲ್ಲಿ ಅವನ್ನು ನಿಚ್ಚಳವಾಗಿ ತಿಳಿಸಲಾಗಿದೆ:

ಯತ್ರೋಪರಮತೇ ಚಿತ್ತಂ ನಿರುದ್ಧಂ ಯೋಗಸೇವಯಾ ।
ಯತ್ರ ಚೈವಾತ್ಮನಾಽಽತ್ಮಾನಂ ಪಶ್ಯನ್ನಾತ್ಮನಿ ತುಷ್ಯತಿ ॥

ಸುಖಮಾತ್ಯಂತಿಕಂ ಯತ್ತದ್ಬುದ್ಧಿಗ್ರಾಹ್ಯಮತೀಂದ್ರಿಯಮ್ ।
ವೇತ್ತಿ ಯತ್ರ ನ ಚೈವಾಯಂ ಸ್ಥಿತಶ್ಚಲತಿ ತತ್ತ್ವತಃ ॥

ಯಂ ಲಬ್ಧ್ವಾ ಚಾಪರಂ ಲಾಭಂ ಮನ್ಯತೇ ನಾಧಿಕಂ ತತಃ ।
ಯಸ್ಮಿಂಸ್ಥಿತೋ ನ ದುಃಖೇನ ಗುರುಣಾಽಪಿ ವಿಚಾಲ್ಯತೇ ॥

ತಂ ವಿದ್ಯಾದ್ದುಃಖಸಂಯೋಗವಿಯೋಗಂ ಯೋಗಸಂಜ್ಞಿತಮ್ ॥

ಈ ನುಡಿಗಳ ಭಾವ ಇದು: 'ಯೋಗಸಾಧನೆಯಿಂದ ಮನಸ್ಸು ಸ್ಥಿರಗೊಂಡು ಶಾಂತವಾಗುತ್ತದೆ. ಯೋಗದ ಸ್ಥಿತಿಗೇರಿದವನು ಶುದ್ಧ ಮನಸ್ಸಿನಿಂದ ಆತ್ಮತತ್ತ್ವವನ್ನು ಕಾಣುತ್ತಾ ತನ್ನಲ್ಲೇ ತಾನು ಸುಖಿಸುತ್ತಿರುತ್ತಾನೆ; ಇಂದ್ರಿಯಗಳಿಗೆ ನಿಲುಕದ, ಬುದ್ಧಿಗೆ ಮಾತ್ರ ಅರಿವಾಗುವ ಅತ್ಯುತ್ತಮವಾದ ಸುಖವನ್ನು ಪಡೆಯುತ್ತಾನೆ, ಮತ್ತು ಪರಮಸತ್ಯದಿಂದ ವಿಚಲಿತನಾಗುವುದಿಲ್ಲ. ಅಲ್ಲದೆ, ಆ ಯೋಗದ ಸುಖವನ್ನು ಪಡೆದಾಗ ಅವನಿಗೆ ಬೇರಾವುದೇ ಸುಖವೂ ರುಚಿಸುವುದಿಲ್ಲ, ಯೋಗದ ಆನಂದಕ್ಕಿಂತ ಮಿಗಿಲಾದ ಸುಖವೊಂದು ಇರಬಲ್ಲುದು ಎಂದು ಅನಿಸುವುದೇ ಇಲ್ಲ. ಅಂತಹ ಪರಮಾನಂದವನ್ನು ಉಂಟುತ್ತಿರುತ್ತದೆ, ಅವನ ಮನಸ್ಸು. ಆ ಯೋಗಸುಖದಲ್ಲಿ ತಳ ವೂರಿದ ವ್ಯಕ್ತಿಯು ಎಂತಹ ದುಃಖದ ಆಘಾತದಿಂದಲೂ ಅದುರದೆ ಬಂಡೆಯಂತೆ ಸ್ಥಿರನಾಗಿ, ಶಾಂತನಾಗಿ ಇರುತ್ತಾನೆ. ಇಂತಹ ಲಕ್ಷಣಗಳು ಸಾಧಕನಲ್ಲಿ ಮೂಡಿಬಂದಾಗ ಅದನ್ನು 'ಯೋಗ ಸ್ಥಿತಿ' ಎಂದು ತಿಳಿಯತಕ್ಕದ್ದು.'

ಈ ಬಗೆಯ ಆಧ್ಯಾತ್ಮಿಕ ಸಾಧನೆಯನ್ನು ಮಾಡಬಯಸುವವರಿಗೆ ಶ್ರೀಮಾತೆ ಶಾರದಾದೇವಿಯವರ ಜೀವನ-ಸಂದೇಶಗಳು ಉಜ್ವಲ ದಾರಿದೀಪದಂತಿವೆ. ತಮ್ಮಲ್ಲಿಗೆ ಬಂದ ಸಾಧಕರನ್ನೂ ಮುಮುಕ್ಷುಗಳನ್ನೂ ಅವರು ಮುನ್ನಡೆಸಿದ ವಿವರಗಳು ಇಂದಿನ ಸಾಧಕರಿಗೆ ಒಂದು ಆತ್ಮೀಯ ಕೈಪಿಡಿಯಾಗಬಲ್ಲವು. ಏಕೆಂದರೆ, ನಿತ್ಯಜೀವನದಲ್ಲಿ ಯೋಗಸಾಧನೆಯನ್ನು ಮಾಡುವ ಬಗ್ಗೆ ಶ್ರೀಮಾತೆಯವರು ಹೊಸ ಆವಿಷ್ಕಾರಗಳನ್ನೇ ಮಾಡಿದ್ದಾರೆ ಮತ್ತು ವಿನೂತನ ಹಾದಿಯನ್ನು ತೆರೆದು ತೋರಿದ್ದಾರೆ. ಅವರ ನುಡಿಗಳೆಲ್ಲವೂ ಅಪೂರ್ವ ಜೀವನಾನುಭವದಿಂದ ಪರಿಪಾಕಗೊಂಡವು, ಆಧ್ಯಾತ್ಮಿಕ ಅನುಭೂತಿಯಿಂದ ಹೊಮ್ಮಿದವು. ಆದ್ದರಿಂದಲೇ ಅವುಗಳ ಮೂಲಕ ಶಕ್ತಿ-ಸ್ಫೂರ್ತಿಗಳ ಹೊಳೆ ಹರಿಯುವುದನ್ನು ಇಂದಿಗೂ ನಾವು ಅನುಭವಿಸಬಹುದಾಗಿದೆ.

ಒಮ್ಮೆ ಒಬ್ಬ ಶಿಷ್ಯ ಶ್ರೀಮಾತೆಯವರನ್ನು ಕೇಳಿದ: ''ಅಮ್ಮಾ, ಆಧ್ಯಾತ್ಮಿಕ ಸಾಧನೆಯನ್ನು ಹೇಗೆ ಮಾಡುವುದು?'' ಶ್ರೀಮಾತೆಯವರೆನ್ನುತ್ತಾರೆ: ''...ಆಧ್ಯಾತ್ಮಿಕ ಸಾಧನೆ ಎಂದರೆ ಇನ್ನೇನು ಅಂತ ತಿಳಿದುಕೊಂಡೆ? ಸದಾ ಭಗವಂತನ ಪಾದಗಳಲ್ಲಿ ಮನಸ್ಸನ್ನು ಇಟ್ಟಿರುವುದೇ ಸಾಧನೆ; ಮನಸ್ಸಿನಲ್ಲಿ ಸದಾ ಭಗವಂತನ ಸ್ಮರಣೆ ಮಾಡುವುದೇ ಸಾಧನೆ.''

ದೈನಂದಿನ ಜೀವನ ಎಂದರೆ ಉದ್ಯೋಗ, ಶಾಲಾ-ಕಾಲೇಜು, ಬ್ಯಾಂಕು ಕಾರ್ಖಾನೆ, ಕುಟುಂಬ ನಿರ್ವಹಣೆ ಇವೆಲ್ಲವೂ ಸೇರಿಕೊಳ್ಳುತ್ತದೆ. ಇವು ಯಾವುದನ್ನೂ ಕಡೆಗಣಿಸುವಂತಿಲ್ಲ. ಆದರೆ ಹಾಗೆಂದು ಕರ್ತವ್ಯದ ನೆಪದಲ್ಲಿ ಸಾಧನೆಯನ್ನು ಕಟ್ಟಿಡುವುದೂ ಸರಿಯಲ್ಲ. ಎಲ್ಲ ಚಟುವಟಿಕೆಗಳ ಜೊತೆಜೊತೆಗೇ ಸಾಧನೆಯನ್ನೂ ತಪ್ಪದೆ ಮಾಡಬೇಕು ಎನ್ನುತ್ತಾರೆ ಶ್ರೀಮಾತೆಯವರು.

''ಕರ್ತವ್ಯ ಕರ್ಮಗಳನ್ನು ಮಾಡಲೇಬೇಕು. ಕೆಲಸ ಮಾಡುತ್ತಿದ್ದರೆ ಮನಸ್ಸು ಹರಿದಾಡುವುದು ತಪ್ಪುತ್ತದೆ. ಆದರೆ ಇದರೊಂದಿಗೆ ಜಪ-ಧ್ಯಾನ-ಪ್ರಾರ್ಥನೆಗಳೂ ಅತ್ಯಂತ ಆವಶ್ಯಕ. ಕನಿಷ್ಟ ಪಕ್ಷ ಪ್ರತಿದಿನ ಬೆಳಗ್ಗೆ-ಸಂಜೆ ಜಪಧ್ಯಾನಕ್ಕೆ ಕುಳಿತುಕೊಳ್ಳಲೇಬೇಕು. ಇವು ದೋಣಿಗೆ ಚುಕ್ಕಾಣಿಯಂತೆ. ಸಂಜೆ ಹೊತ್ತು ಶಾಂತವಾಗಿ ಕುಳಿತು ಆಲೋಚಿಸಿ ನೋಡಿದರೆ ತಾನು ದಿನವಿಡೀ ಏನೇನು ಮಾಡಿದೆ, ಹೇಗೆ ಹೇಗೆ ನಡೆದುಕೊಂಡೆ ಎನ್ನುವುದೆಲ್ಲ ಮನಸ್ಸಿಗೆ ಬರುತ್ತದೆ. ಆಗ, ನನ್ನ ಮನಸ್ಸು ನಿನ್ನೆಗಿಂತ ಇಂದು ಎಷ್ಟು ಉತ್ತಮಗೊಂಡಿದೆ ಎಂದು ತುಲನೆ ಮಾಡಿ ನೋಡಿಕೊಳ್ಳಬಹುದು. ಬಳಿಕ ಜಪ ಮಾಡುತ್ತ ಇಷ್ಟದೇವರ ಮೇಲೆ ಧ್ಯಾನ ಮಾಡಬೇಕು. ಕೆಲಸ ಕಾರ್ಯಗಳ ಜೊತೆಗೆ ಪ್ರತಿದಿನ ಬೆಳಗ್ಗೆ-ಸಂಜೆ ಜಪ-ಧ್ಯಾನ ಮಾಡುವುದಕ್ಕಾಗಿ ಒಂದು ನಿರ್ದಿಷ್ಟ ಸಮಯವನ್ನು ಮೀಸಲಿಡುವುದು ಅತ್ಯಂತ ಆವಶ್ಯಕ.''

ಈ ಮಾತು ನಿಜಕ್ಕೂ ಎಷ್ಟು ಪರಿಣಾಮಕಾರಿ ಎಂಬುದನ್ನು ಮನಗಾಣಬೇಕಾದರೆ, ಜನ ತಾವೇ ಒರೆಗೆ ಹಚ್ಚಿ ನೋಡಬೇಕು ಅಷ್ಟೆ. ನಿಜಕ್ಕೂ ಶಾಂತಿ-ತೃಪ್ತಿ ಬೇಕೆಂಬುವರು ಆರು ತಿಂಗಳಾದರೂ ಈ ನುಡಿಯಂತೆ ನಡೆದು ನೋಡಬೇಕು. ಕಾಯಿಲೆ ವಾಸಿಯಾಗಬೇಕಾದರೆ ರೋಗಿಯೇ ಔಷಧ ಸೇವಿಸಬೇಕಲ್ಲದೆ, ಅವನ ಪರವಾಗಿ ಇತರರು ಸೇವಿಸಲಾದೀತೆ? ಇಂದು ಜನರಿಗೆ ಬಿಡುವಿಲ್ಲದಷ್ಟು ಕೆಲಸ ಎಂಬುದೇನೋ ನಿಜವೇ. ಆದರೆ ಸುಖ-ಶಾಂತಿಗಳನ್ನು ತಾರದ ಕೆಲಸ ಬರಿ ಕತ್ತೆಕೆಲಸ, ಅಷ್ಟೆ. ಆದ್ದರಿಂದ, ಸ್ವಲ್ಪ ಬಿಡುವು ಮಾಡಿಕೊಳ್ಳುವುದು ಒಳ್ಳೆಯದು. ಕುಂಟು ನೆವ ಕೊಡುವ ತುಂಟರಿಗೆ ಸಮಯ ಸಿಗುವುದುಂಟೆ? 'ಮನಸಿದ್ದಲ್ಲಿ ಮಾರ್ಗ' ಎಂಬ ಮಾತನ್ನು ಮನಸ್ಸಿಗೇ ಒತ್ತಿಹೇಳಬೇಕು. ಶ್ರೀಮಾತೆ ಶ್ರೀಶಾರದಾದೇವಿಯವರು ದಕ್ಷಿಣೇಶ್ವರದಲ್ಲಿ ಶ್ರೀರಾಮಕೃಷ್ಣರ ಸೇವೆ-ಆರೈಕೆಗಳಲ್ಲಿ ನಿರತರಾಗಿದ್ದಾಗ ಅವರಿಗೆ ಕೈತುಂಬ ಕೆಲಸ. ಆದರೆ ಅವರು ಅದೆಷ್ಟು ಸಮರ್ಥವಾಗಿ ಅವುಗಳನ್ನು ನಿಭಾಯಿಸುತ್ತಿದ್ದರೆಂದರೆ, ಒಮ್ಮೆ ಒಬ್ಬ ವ್ಯಕ್ತಿಗೆ ಅವರೆನ್ನುತ್ತಾರೆ: ''ನಾನು ನಿನ್ನ ವಯಸ್ಸಿನಲ್ಲಿ ಅದೆಷ್ಟು ಕೆಲಸ ಮಾಡುತ್ತಿದ್ದೆ! ಆದರೂ ಪ್ರತಿದಿನ ಲಕ್ಷ ಜಪ ಮಾಡಲು ನನಗೆ ಸಮಯ ಸಿಗುತ್ತಿತ್ತು.'' ಇವೆಲ್ಲ ಖಾಲಿ ಮಾತಲ್ಲ ; ದೈನಂದಿನ ಜೀವನದಲ್ಲಿ ಯೋಗಸಾಧನೆಯನ್ನು ಮಾಡುವುದು ಹೇಗೆಂಬ ವಿಷಯದಲ್ಲಿ ಗೈದ ಸಂಶೋಧನೆಯ ಅಮೂಲ್ಯ ನುಡಿ! ಆದರೆ ಎಲ್ಲರಿಗೂ ಆ ಬಗೆಯ ಶುದ್ಧವಾದ - ಶಿಸ್ತುಬದ್ಧವಾದ ಮನಸ್ಸು ಇಲ್ಲದಿರಬಹುದು; ಅಂಥವರಿಗಾಗಿ ಅವರೇ ಒಂದು ಸರಳ ಉಪಾಯವನ್ನು ಸೂಚಿಸುತ್ತಾರೆ: ''ಸಾಧನೆಗೆ ಅಂತ ಗೊತ್ತಾದ ಸಮಯವಿರುವುದು ಅತ್ಯಂತ ಆವಶ್ಯಕ. ಸುಮುಹೂರ್ತ(ಅಂದರೆ ಸಾಧನೆ ಸಫಲವಾಗುವ ಗಳಿಗೆ) ಯಾವಾಗ ಬಂದೀತೆಂದು ಹೇಳಲು ಸಾಧ್ಯವಿಲ್ಲ. ಅದು ಇದ್ದಕ್ಕಿದ್ದಂತೆ ಬಂದುಬಿಡುತ್ತದೆ. ಅದರ ಬಗ್ಗೆ ಯಾರಿಗೂ ಮೊದಲೇ ತಿಳಿಯುವುದಿಲ್ಲ. ಆದ್ದರಿಂದ ಇತರ ಕೆಲಸಗಳಲ್ಲಿ ಎಷ್ಟೇ ಬಿಡುವಿಲ್ಲದಿದ್ದರೂ ಒಂದು ಗೊತ್ತಾದ ಕ್ರಮವನ್ನು ಕೈಬಿಡಬಾರದು... ಎಷ್ಟೇ ಕೆಲಸ ಕಾರ್ಯಗಳಿದ್ದರೂ ಕೊನೆಯ ಪಕ್ಷ ದೇವರ ಸ್ಮರಣೆಯನ್ನಾದರೂ ಮಾಡಿ ನಮಸ್ಕರಿಸಬೇಕು.''

ಇನ್ನೊಂದು ಉಪಾಯವಿದೆ: ಕೆಲಸ-ಕಾರ್ಯಗಳ ನಡುವೆಯೂ ಮನಸ್ಸಿನಿಂದ ಭಗವತ್ ಸ್ಮರಣೆ, ಜಪ ಮಾಡುತ್ತಿರಬಹುದಲ್ಲ. ಇದರ ಮರ್ಮ ಏನೆಂದರೆ-ದೇಹವನ್ನು ಕರ್ಮದಲ್ಲಿ , ಮನಸ್ಸನ್ನು ದೇವನಲ್ಲಿ ತೊಡಗಿಸುವುದು. ಒಮ್ಮೆ ಒಬ್ಬ ಭಕ್ತ ಶ್ರೀಮಾತೆಯವರಿಂದ ಮಂತ್ರದೀಕ್ಷೆ ಪಡೆದುಕೊಂಡು ಹೊರಡುವಾಗ ಕೇಳಿದ: ''ಅಮ್ಮ, ನನಗೆ ಉಪಾಯವೇನು?'' (ಅಂದರೆ, ಆಧ್ಯಾತ್ಮಿಕ ಜೀವನದಲ್ಲಿ ಮುಂದುವರಿಯಲು ಮಾರ್ಗವೇನು?) ಆಗ ಶ್ರೀಮಾತೆಯವರು ಅವನಿಗೆ ಗೋಡೆಯ ಗೂಡಿನಲ್ಲಿದ್ದ ಗಡಿಯಾರವನ್ನು ತೋರಿಸಿ ಹೇಳುತ್ತಾರೆ: ''ಹೇಗೆ ಆ ಗಡಿಯಾರ ನಿರಂತರ 'ಟಿಕ್' 'ಟಿಕ್' ಸದ್ದು ಮಾಡುತ್ತದೋ ಹಾಗೆ ನೀನು ನಿರಂತರವಾಗಿ ಭಗವನ್ನಾಮೋಚ್ಚಾರಣೆ ಮಾಡುತ್ತಾ ಹೋಗು. ಅದೇ ನಿನಗೆ ಎಲ್ಲವನ್ನೂ ತಂದುಕೊಡುತ್ತದೆ. ನೀನು ಬೇರೆ ಏನನ್ನೂ ಮಾಡಬೇಕಿಲ್ಲ'' ಎಂದು. ಇದು ಅತ್ಯಂತ ಪ್ರಾಯೋಗಿಕವಾದ ಸಲಹೆ. ಗೃಹಿಣಿಯರು ಮನೆಗೆಲಸದಲ್ಲಿ ತೊಡಗಿರುವಾಗ, ನೌಕರರು ಕರ್ಮಗಳನ್ನು ಮಾಡುತ್ತಿರುವಾಗ, ದಾರಿಯಲ್ಲಿ ನಡೆಯುವಾಗ, ಬಸ್ಸಿಗಾಗಿ ಕಾಯುತ್ತಿರುವಾಗ, ಪ್ರಯಾಣದಲ್ಲಿರುವಾಗ - ಹೀಗೆ ಎಲ್ಲ ಕಾಲದಲ್ಲೂ ಅಂತರಂಗದಲ್ಲಿ ಸಾಧನೆಯ ಅಂತಃಸ್ರೋತ ನಿಲ್ಲದೆ ಹರಿಯುತ್ತಿರುವಂತೆ ನೋಡಿಕೊಳ್ಳಬಹುದು. ಆದರೆ ತಲೆಕೊಟ್ಟು ಮಾಡಬೇಕಾದ ಕೆಲಸದಲ್ಲಿರುವವರು ಇದನ್ನು ಅನುಸರಿಸಲಾಗದು; ಕೆಲಸ ಕೆಟ್ಟುಹೋಗಿಬಿಡುತ್ತದೆ. ಅಂಥವರು ನಿತ್ಯಜೀವನದಲ್ಲಿ ಯೋಗಸಾಧನೆ ಮಾಡುವುದು ಹೇಗೆ? ಅಂಥವರಿಗೂ ಶ್ರೀಮಾತೆಯವರು ಪರಿಹಾರೋಪಾಯ ಸೂಚಿಸಿದ್ದಾರೆ. ಸುವಾಸಿನಿ ಎಂಬವಳು ಶ್ರೀಮಾತೆಯವರಿಂದ ಮಂತ್ರದೀಕ್ಷೆ ಪಡೆದಿದ್ದಳು. ಅವಳು ಒಮ್ಮೆ ಶ್ರೀಮಾತೆಯವರ ಬಳಿ, ತನ್ನಿಂದ ನಿಯತವಾಗಿ ಸಾಧನೆ ಸಾಧ್ಯವಾಗುತ್ತಿಲ್ಲ , ಏನು ಮಾಡಲಿ ಎಂದು ಕೇಳಿದಳು. ಆಗ ಅವರೆನ್ನುತ್ತಾರೆ: ''ನೀನು ಏನೇನು ಕೆಲಸಕಾರ್ಯಗಳನ್ನು ಮಾಡುತ್ತಿದ್ದೀಯೋ ಅದನ್ನೇ ಸಾಧನೆ ಎಂದು ತಿಳಿ. ಬೇರೆ ಇನ್ನೇನು ಸಾಧನೆ ಬೇಕು? ಶುದ್ಧ ಭಕ್ತಿಯನ್ನು ಕರುಣಿಸುವಂತೆ ಶ್ರೀರಾಮಕೃಷ್ಣರನ್ನು ಪ್ರಾರ್ಥಿಸಿಕೊ.'' ಇದು ಶ್ರೀಮಾತೆಯವರು ಹೇಳಿಕೊಟ್ಟ ಒಂದು ಸರಳ ಸಾಧನೆ. ಮಂತ್ರದೀಕ್ಷೆಯನ್ನು ಪಡೆದುಕೊಂಡರೂ ನಿತ್ಯಜಪ ಮಾಡಲು, ಸಾವಿರಗಟ್ಟಲೆ ಜಪ ಮಾಡಲು ಎಷ್ಟು ಜನರಿಂದ ಸಾಧ್ಯ? ಅಂಥವರು ತಾವು ಮಾಡುವ ಪ್ರತಿಯೊಂದು ಕರ್ಮವನ್ನೂ ಸಾಧನೆಯ ದೃಷ್ಟಿಯಿಂದ ಮಾಡಲಿ ಎಂಬ ತಂತ್ರವನ್ನು ಅಳವಡಿಸಿ ಕೊಟ್ಟಿದ್ದಾರೆ ಶ್ರೀಮಾತೆಯವರು. ಅಂದರೆ, ಮನುಷ್ಯ ತಾನು ಎಲ್ಲಿದ್ದರೆ ಅಲ್ಲೇ ಮನಸ್ಸನ್ನು ಅಧ್ಯಾತ್ಮಕ್ಕೆ ಒಡಂಬಡಿಸಬಹುದು ಎಂಬುದು ಅವರ ಮಾತಿನ ಮರ್ಮ!

''ಶುದ್ಧ ಭಕ್ತಿಯನ್ನು ಕರುಣಿಸುವಂತೆ ಪ್ರಾರ್ಥಿಸಿಕೊ'' ಎಂಬ ಕೊನೆಯ ವಾಕ್ಯವನ್ನು ನಾವಿಲ್ಲಿ ವಿಶೇಷವಾಗಿ ಗಮನಿಸಬೇಕು. ಏಕೆಂದರೆ ಅದು ಅತ್ಯಂತ ಪ್ರಮುಖವಾದ ವಿಷಯ. ಮಾಡಿದ ಕೆಲಸಗಳೆಲ್ಲ ಆಧ್ಯಾತ್ಮಿಕ ಸಾಧನೆಯಾಗಿ ಮಾರ್ಪಡಬೇಕಾದರೆ, ಅದರೊಂದಿಗೆ ಪ್ರಾರ್ಥನೆ ಸೇರಿಕೊಂಡಿರಬೇಕು. ಇಲ್ಲದಿದ್ದರೆ ಯಂತ್ರಕ್ಕೂ ಮನುಷ್ಯನಿಗೂ ವ್ಯತ್ಯಾಸವೆಲ್ಲಿದೆ? ಹಾಗೆ ನೋಡಿದರೆ, ಯಂತ್ರವೇ ಇನ್ನೂ ಚೆನ್ನಾಗಿ ಕೆಲಸಮಾಡೀತು, ಹೆಚ್ಚು ಕೆಲಸ ಮಾಡೀತು! ಭಾವದಲ್ಲೇ ಮನುಷ್ಯನ ಹಿರಿಮೆ ಇರುವುದು. ಭಕ್ತಿಭಾವವನ್ನು ಕರುಣಿಸಬೇಕಾದವನು ಭಗವಂತ. ಆದ್ದರಿಂದ ಅವನನ್ನು ಭಕ್ತಿಗಾಗಿ ಪ್ರಾರ್ಥಿಸಿಕೊಳ್ಳುತ್ತ, ಅನಿವಾರ್ಯವಾಗಿ ಮಾಡಲೇಬೇಕಾದ ಗೃಹಕೃತ್ಯಗಳನ್ನು ಮಾಡಿಕೊಂಡುಬಂದರೆ, ಆಗ ಈ ಪ್ರಾರ್ಥನೆಯ ಬಲದಿಂದ ಮಾಡಿದ ಕೆಲಸವೆಲ್ಲ ಆಧ್ಯಾತ್ಮಿಕ ಸಾಧನೆಯಾಗಿ ಪರಿಣಮಿಸಿ ಅದು ನಮ್ಮ ಉನ್ನತಿಗೆ ಸಹಕಾರಿಯಾಗುತ್ತದೆ ಎಂಬುದು ಶ್ರೀಮಾತೆಯವರ ಅಭಿಮತ.

ಈ ಮಾತುಗಳನ್ನೆಲ್ಲ ಓದಿದಾಗ ಒಂದಂಶವಂತೂ ಸ್ಪಷ್ಟವಾಗುತ್ತದೆ. ಅದೇನೆಂದರೆ, ಸಾಧು-ಸಂತರು, ಸದ್ಗುರುಗಳು ಇವರೆಲ್ಲ ಜನರಿಗೆ ಶಾಂತಿ-ನೆಮ್ಮದಿಗಳ ಮಾರ್ಗವನ್ನು ತೋರಿಸಲು ಯಾವ ವಿಧದಲ್ಲೂ ಕೊರತೆ ಮಾಡಿಲ್ಲ. ಆದರೆ ಆ ನುಡಿಗಳಿಗೆ ಕಿವಿಗೊಡಬಲ್ಲವರು ಬೇಕಾಗಿದ್ದಾರೆ, ಅಷ್ಟೆ! ಶ್ರೀಮಾತೆಯವರಂತೂ ಇಂತಹ ಸರಳ, ಸುಲಭ ಉಪಾಯಗಳನ್ನು ವಿಪುಲವಾಗಿ ತಿಳಿಸಿಕೊಟ್ಟಿದ್ದಾರೆ. ಆ ಅಮೃತಮಯ ನುಡಿಗಳನ್ನು ಅಧ್ಯಯನ ಮಾಡಿ ಮೈಗೂಡಿಸಿಕೊಂಡಾಗ ನಮ್ಮ ಬಾಳು ಅರ್ಥಪೂರ್ಣವಾಗುತ್ತದೆ, ಸಾಧನೆ ಸಫಲವಾಗುತ್ತದೆ.



# ಕಳೆದ ದಿನಗಳ ನೆನಪುಗಳು

(ಸ್ವಾಮಿ ವಿರಜಾನಂದರ ಜೀವನ ಹಾಗೂ ಕೆಲವು ಸಮಕಾಲೀನ ಘಟನೆಗಳು)

ಮೂಲ ಬಂಗಾಳಿ: ಸ್ವಾಮಿ ಶ್ರದ್ಧಾನಂದ

ಅನುವಾದ: ಪ್ರವ್ರಾಜಿಕಾ ಯೋಗಾತ್ಮಪ್ರಾಣಾ

## ಭಾಗ ೧೬

ತಂದೆಯ ಮರಣಾನಂತರ ಸಂಸಾರದಲ್ಲಿ ಅವ್ಯವಸ್ಥೆ, ಗೊಂದಲಗಳುಂಟಾಗಿವೆ ಎಂಬಿತ್ಯಾದಿ ಮನೆಯ ವಾರ್ತೆಗಳು ಸ್ವಾಮಿ ವಿರಜಾನಂದರ ಕಿವಿಗೆ ಮುಟ್ಟಿದವು. ಮೂವತ್ತು ಸಾವಿರ ರೂಪಾಯಿಗಳಷ್ಟು ಔಷಧದ ಬಿಲ್‌ಗಳು ಗಿರಾಕಿಗಳಿಂದ ಸಂದಾಯವಾಗದೇ ಬಿದ್ದಿದ್ದವು. ಅಷ್ಟೇ ಏಕೆ, ಅನೇಕದರ ಗಡುವೂ ತೀರಿಹೋಗಿತ್ತು. ಯಾರೂ ಸರಿಯಾಗಿ ಹಣವನ್ನು ಪಾವತಿ ಮಾಡಲೊಲ್ಲರು. ಇವೆಲ್ಲ ತಂದೆಯ ಪರೋಪಕಾರಕ್ಕೆ ಸಿಕ್ಕ ಪ್ರತ್ಯುಪಕಾರ! ತಂದೆ ಸ್ವಲ್ಪ ಸಾಲವನ್ನೂ ಮಾಡಿದ್ದರು; ಠಕ್ಕಿನ ಸಾಲದಾರನು ವ್ಯಾವಹಾರಿಕ ಅನುಭವವಿಲ್ಲದ ಸ್ವಾಮಿ ವಿರಜಾನಂದರ ಸೋದರರಿಬ್ಬರನ್ನೂ[೧] ವಂಚಿಸಿ, ನಾರಿಕೇಲ್‌ಡಂಗಾದಲ್ಲಿದ್ದ ಮನೆ, ತಂದೆಯ ಎರಡು ಡಿಸ್ಪೆನ್ಸರಿ, ಕುದುರೆಗಳುಳ್ಳ ಎರಡು ಗಾಡಿ ಮುಂತಾದವುಗಳನ್ನು ವಶಪಡಿಸಿಕೊಂಡಿದ್ದನು.

ಇದನ್ನೆಲ್ಲ ಕೇಳಿದ ಕಾಳೀಕೃಷ್ಣನ ಕೋಮಲ ಹೃದಯಕ್ಕೆ ಆಘಾತವಾಯಿತು. ಆದರೆ ಸಂನ್ಯಾಸಿ ಸ್ವಾಮಿ ವಿರಜಾನಂದರಿಗೆ ತಾನೇ ಏನು ಮಾಡಲು ಸಾಧ್ಯವಿತ್ತು? ಈ ದುಃಖಕರವಾದ ವಿಚಾರಗಳನ್ನು ದುಃಸ್ವಪ್ನದಂತೆ ಮನಸ್ಸಿನಿಂದ ದೂರ ತಳ್ಳಿದರು.

೧೯೦೧ರ ಏಪ್ರಿಲ್ ೧೧ರಂದು, ಮಾಯಾವತಿಯಿಂದ ಎರಡು ತಿಂಗಳ ಮಟ್ಟಿಗೆ ರಜೆ ತೆಗೆದುಕೊಂಡು ಸ್ವಾಮಿ ವಿರಜಾನಂದರು ಕೇದಾರ, ಬದರೀ ಯಾತ್ರೆಗೆ ಹೊರಟಿದ್ದಾರೆ; ಜೊತೆಯಲ್ಲಿ ಬ್ರಹ್ಮಚಾರಿ ಜ್ಞಾನ್ ಸಹ ಇದ್ದಾನೆ. ಕಂಬಳಿ, ಬಟ್ಟೆ ಮತ್ತು ಚೌಕಗಳನ್ನು ಹೆಗಲಿಗೇರಿಸಿ, ಅವಲಂಬನ ವಿಹೀನರಾಗಿ ನಡೆದಿದ್ದಾರೆ. ಖರ್ಚಿಗಾಗಿ ಅವರ ಬಳಿ ೫ ರೂ. ಮಾತ್ರವಿದೆ. ಅವರು

[೧] ಕಾಳೀಕೃಷ್ಣರ ಎರಡನೆಯ ತಮ್ಮನಾದ ಪ್ರಾಣಕೃಷ್ಣನು ಕೆಲವು ವರ್ಷಗಳ ಹಿಂದೆಯೇ ಎಲ್ಲಿಗೋ ಹೋಗಿಬಿಟ್ಟನು. ಅವನ ಸುದ್ದಿ ಸಮಾಚಾರಗಳೇನೂ ತಿಳಿದುಬರಲಿಲ್ಲ.

ಮೊದಲು ಬಂದು ತಲುಪಿದ್ದು ಆಲ್ಮೋರಕ್ಕೆ. ಪ್ರಯಾಣದ ಮಧ್ಯೆ ಮಡಕೆಯೊಂದರಲ್ಲಿ ಖಿಚುಡಿ ಮಾಡಿಕೊಂಡು ಉಂಡರು. ಆಲ್ಮೋರದಲ್ಲಿ ಭಕ್ತಾಗ್ರಣಿ ಬದ್ರೀ ಷಾರವರ ಮನೆಯಲ್ಲಿ ಇಳಿದುಕೊಂಡರು. ತೀರ್ಥಯಾತ್ರೆಯ ಖರ್ಚಿಗೆಂದು ಅವರು ೮ ರೂ.ಗಳನ್ನು ಕೊಟ್ಟರು.

ಆಲ್ಮೋರದಿಂದ ಕೆಲವು ದಿನಗಳು ನಡೆದರೆ ರುದ್ರಪ್ರಯಾಗ ಸಿಗುವುದು. ಅಲ್ಲಿಂದ ದೊಡ್ಡ ರಸ್ತೆ ಹಿಡಿದು ಕೇದಾರ, ಬದರಿಗೆ ಹೋಗಬಹುದು. ರುದ್ರಪ್ರಯಾಗದ ಹತ್ತಿರ ನದೀತೀರದಲ್ಲಿ ಚಿಕ್ಕ ಚಿಕ್ಕ ಶಿವ ಮಂದಿರಗಳಿರುವ ರಮ್ಯ ತಾಣ ಅವರಿಗೆ ಕಂಡಿತು. ಅಲ್ಲೇ ಅಂಗಡಿಯಿಂದ ಮಡಕೆಯೊಂದನ್ನು ಕೊಂಡು ತಂದು ಇಬ್ಬರೂ ಸೇರಿ ಅಡಿಗೆ ಮಾಡಿದರು. ಊಟಕ್ಕೆ ಕುಳಿತಾಗ ಹಿಂಡು ಹಿಂಡು ನೊಣಗಳು ಆಹಾರವನ್ನು ಮುತ್ತಲಾರಂಭಿಸಿದವು; ಅನ್ನವೇ ಕಾಣುತ್ತಿರಲಿಲ್ಲ. ಸ್ವಾಮಿ ವಿರಜಾನಂದರು ಹೇಗೋ ಊಟ ಮುಗಿಸಿದರು. ಜ್ಞಾನ್ ನದೀತೀರಕ್ಕೆ ಹೋಗಿ ತಿಂದು ಬಂದನು. ಕೇದಾರ-ಬದರಿಗೆ ಹೋಗುವ ದೊಡ್ಡ ರಸ್ತೆಗೆ ಬಂದಾಗ, ಉದಾಸಿ ಪಂಥದ ಸಾಧುಗಳು ಸಿಕ್ಕರು. ಇವರಿಬ್ಬರನ್ನೂ ಆ ಉದಾಸಿ ಸಾಧುಗಳು ತುಂಬ ಆದರದಿಂದ ತಮ್ಮ ಸಹ ಪ್ರಯಾಣಿಕರನ್ನಾಗಿ ಮಾಡಿಕೊಂಡರು.

ಈ ದಾರಿಯಲ್ಲಿ ಅಲ್ಲಲ್ಲಿ ಒಳ್ಳೆಯ ಧರ್ಮಶಾಲೆಗಳಿದ್ದವು. ಯಾತ್ರಾ ತಂಡದವರು ಪ್ರತಿದಿನವೂ ಬೆಳಿಗ್ಗೆಯೇ ತಮ್ಮ ಪ್ರಯಾಣವನ್ನು ಪ್ರಾರಂಭಿಸುತ್ತಿದ್ದರು. ೧೦-೧೫ ಮೈಲಿ ನಡೆದು, ನಂತರ ಧರ್ಮಶಾಲೆಯೊಂದರಲ್ಲಿ ಸ್ನಾನ, ಊಟ, ವಿಶ್ರಾಂತಿ ಮುಗಿಸಿ, ಮತ್ತೆ ಸಂಜೆ ಸ್ವಲ್ಪ ದೂರವನ್ನು ಕ್ರಮಿಸುತ್ತಿದ್ದರು. ಉದಾಸಿ ಸಾಧುಗಳು ಸ್ವಾಮಿ ವಿರಜಾನಂದರಿಗಾಗಲಿ, ಜ್ಞಾನ್ ಬ್ರಹ್ಮಚಾರಿಗಾಗಲಿ ಭಿಕ್ಷೆ ಬೇಡಲು ಬಿಡದೆ, ತಾವೇ ಭಿಕ್ಷೆ ಬೇಡಿ ತರುತ್ತಿದ್ದರು. ಆದರೆ ಅಡಿಗೆ ಮಾಡುವಾಗ ಇವರಿಬ್ಬರೂ ಸಹಾಯ ಮಾಡುತ್ತಿದ್ದರು. ಉದಾಸಿ ತಂಡದವರು ವಿನೋದ ಪ್ರಿಯರು. ಬ್ರಹ್ಮಚಾರಿ ಜ್ಞಾನ್ ಸಹ ಅವರೊಂದಿಗೆ ಹಾಸ್ಯ, ಅಣಕಗಳಲ್ಲಿ ತೊಡಗುತ್ತಿದ್ದ. ಊಟಕ್ಕೆ ಚಪಾತಿ, ತರಕಾರಿಯ ಭಿಕ್ಷೆ ಸಿಕ್ಕಿದರೂ ಕೂಡ, ಜ್ಞಾನ್ ಅಂಗಡಿಯಿಂದ ಒಂದು ಪೈಸೆಗೆ ಬೆಲ್ಲವನ್ನು ತಂದು ಎಲ್ಲರಿಗೂ ಹಂಚುತ್ತಿದ್ದ. 'ತ್ರಿಯುಗಿ ನಾರಾಯಣ' ಎಂಬ ಸ್ಥಳದ ಹತ್ತಿರ ಅವರು ಒಂದು ದಿನ ತಂಗಿದ್ದರು. ಅಂದು ಯಾವ ಸೇಠ್‌ಗಳೂ ಅಲ್ಲಿ ತಂಗಿರಲಿಲ್ಲ.[೨] ಆದ್ದರಿಂದ ಸಾಧುಗಳೆಲ್ಲ ಅಂದಿನ ಭಿಕ್ಷೆಗೇನು ಮಾಡುವುದೆಂದು ತಮ್ಮ ತಮ್ಮಲ್ಲೇ ಚಿಂತನ-ಮಂಥನ ಮಾಡಿಕೊಳ್ಳುತ್ತಿದ್ದರು. ಒಬ್ಬ ಸಾಧು, 'ಕುಛ್ ಪರವಾ ನಹೀಂ' (ಏನೂ ಪರವಾಗಿಲ್ಲ) ಎಂದರು. ಅಷ್ಟರಲ್ಲಿ ವೃದ್ಧೆಯೊಬ್ಬಳು ಬಂದು ಆ ಸಾಧುಗಳೊಂದಿಗೆ ಮಾತನಾಡತೊಡಗಿದಳು. ಆಕೆಯೊಂದಿಗೆ ವೇದಾಂತ ವಿಷಯಗಳ ಬಗ್ಗೆ ಪರಾಮರ್ಶಿಸುತ್ತಿದ್ದಾಗ, ಮಾತು ವೈರಾಗ್ಯ ಹಾಗೂ ತಿತಿಕ್ಷೆಯ ಕಡೆಗೆ ತಿರುಗಿತು. ಆಗ ಮೇಲೆ ಹೇಳಿದ ಸಾಧು ಪ್ರಾಸಂಗಿಕವಾಗಿ, ''ನೋಡಿ ತಾಯಿ, ನಮಗಿಂದು ಹೊಟ್ಟೆಗೇನೂ ಹಿಟ್ಟಿಲ್ಲ. ಅದರಿಂದೇನು? ಕುಛ್ ಪರವಾ ನಹೀಂ'' ಎಂದರು. ಇದನ್ನು ಕೇಳಿದ ಆ ವೃದ್ಧೆಯು ಸಾಧುಗಳಿಗೆಂದು ಗೋಧಿಹಿಟ್ಟು ಮುಂತಾದವುಗಳನ್ನು ಅಂಗಡಿಯಿಂದ ಕೊಂಡು ತಂದರು. ಎಲ್ಲರಿಗೂ ಊಟ ದೊರಕಿ, ಆನಂದವೂ ಆಯಿತು.

ಆಗ ಚೀನಾದ ಯುದ್ಧವು ನಡೆಯುತ್ತಿತ್ತು. ಸಾಧುಗಳು ಅದರ ಸಂಬಂಧವಾಗಿಯೂ ರಾಜನೀತಿಯ ಸಂಬಂಧವಾಗಿಯೂ ಮಾತುಗಳನ್ನಾಡುತ್ತಿದ್ದರು. ಗುಪ್ತಕಾಶಿಯ ದರ್ಶನದ ನಂತರ ಎಲ್ಲರೂ ಗೌರೀಕುಂಡವನ್ನು ತಲುಪಿದರು. ಅಲ್ಲಿನ ಆಧ್ಯಾತ್ಮಿಕ ಪರಿಸರವು ಕಾಳೀಕೃಷ್ಣರನ್ನು ಸಂಮ್ಮೋಹನಗೊಳಿಸಿತು. ಅಲ್ಲಂತೂ ವಿಪರೀತ ಚಳಿ. ಸ್ವಾಮಿ ವಿರಜಾನಂದರು ಹಾಗೂ ಜ್ಞಾನ್ ಒಂದು ಕಂಬಳಿಯನ್ನು ಹಾಸಿ, ಒಂದೇ ಕಂಬಳಿಯನ್ನು ಇಬ್ಬರೂ ಹೊದ್ದು, ಅಂದಿನ ರಾತ್ರಿಯನ್ನು ಬಹು ಕಷ್ಟದಿಂದ ಕಳೆದರು. ಮಾರನೇ ದಿನ ಮುಂಜಾನೆಯೇ ಕೇದಾರದತ್ತ ಹೊರಟರು. ಕಾಳೀಕೃಷ್ಣರಿಗೆ ಸ್ವಲ್ಪ ಜ್ವರ ಬಂದಂತಾಗಿತ್ತಾದರೂ ಪ್ರಯಾಣ ಮುಂದುವರೆಸಿ, ನಿಧಾನವಾಗಿ ನಡೆದು ಮೇ ೨ರಂದು ಸಂಜೆಯ ಹೊತ್ತಿಗೆ ಕೇದಾರವನ್ನು ತಲುಪಿದರು. ಕೇದಾರನಾಥದ ಯಾತ್ರೆಯ ಸಮಯಕ್ಕಿಂತ ಮೊದಲೇ ಅಲ್ಲಿಗೆ ಹೋಗಿದ್ದರಿಂದ, ಕೇದಾರದ ಬಹುಭಾಗವು ಹಿಮಾಚ್ಛಾದಿತವಾಗಿತ್ತು. ಕೇದಾರನಾಥ ಮಂದಿರದ ಗೋಪುರವಷ್ಟೇ ಹಿಮವಿಲ್ಲದೆ ಕಾಣಿಸುತ್ತಿತ್ತು.

ಅಲ್ಲಲ್ಲಿ ಮರದ ಮನೆಗಳಿರುತ್ತವೆಂದೂ, ಹಿಮದಲ್ಲಿ ಮುಚ್ಚಿ ಹೋಗಿರುತ್ತವೆಂದೂ ಕೆಲವು ಸಾಧುಗಳು ಹೇಳಿದ್ದರಿಂದ ಈಗ ಎಲ್ಲರೂ ಅದನ್ನು ಪತ್ತೆಹಚ್ಚಲಾರಂಭಿಸಿದರು. ಹಿಮಪ್ರದೇಶದಲ್ಲಿ ಓಡಾಡಲು ಬಳಸುವ ಊರುಗೋಲುಗಳಿಗೆ ಕೆಳತುದಿಯಲ್ಲಿ ಚೂಪಾದ ಲೋಹದ ಶಂಕುವನ್ನು ಅಳವಡಿಸಿರುತ್ತಾರೆ. ಸಾಧುಗಳ ಹತ್ತಿರವಿದ್ದ ಇಂತಹ ಕೋಲುಗಳಿಂದಲೇ ಒಂದು ಮನೆಯನ್ನು ಪತ್ತೆಹಚ್ಚಿ, ಹಿಮವನ್ನು ಸ್ವಲ್ಪ ಸ್ವಲ್ಪವಾಗಿ ಅಗೆದು ಬಾಗಿಲನ್ನು ಹುಡುಕಿ ತೆಗೆಯಲಾಯಿತು. ಎಲ್ಲರೂ ಅಂಬೆಗಾಲಿಟ್ಟುಕೊಂಡು


ಕೇದಾರನಾಥ ದೇವಾಲಯ

---

೨ ಸಾಮಾನ್ಯವಾಗಿ ಧನಿಕರಾದ ಸೇಠ್‌ಗಳು ಯಾವುದಾದರೂ ಛತ್ರ ಅಥವಾ ಬಿಡಾರಗಳಿಗೆ ಬಂದು ತಮ್ಮ ಹಣದಿಂದ ಅಕ್ಕಿ, ಗೋಧಿಹಿಟ್ಟು ಮುಂತಾದವುಗಳನ್ನು ತೀರ್ಥಯಾತ್ರೆ ಮಾಡುವ ಸಾಧುಗಳಿಗೆ ವಿತರಿಸುತ್ತಾರೆ.

ಒಳಕ್ಕೆ ಪ್ರವೇಶಿಸಿದರು. ಇದ್ದದ್ದನ್ನು ಹಾಸಿಕೊಂಡು ಮಲಗಲು ಸಿದ್ಧರಾದರು. ಆದರೆ ವಿಪರೀತ ಚಳಿಯಿಂದಾಗಿ ನಡುಗತೊಡಗಿದರು. 'ಎಲ್ಲಿಂದ ಸೌದೆಯನ್ನು ತರುವುದು' ಎಂಬುದೇ ಎಲ್ಲರ ಸಮಸ್ಯೆಯಾಗಿತ್ತು. ಅಷ್ಟರಲ್ಲಿ ಆ ಮನೆಯ ಒಂದು ಭಾಗದಲ್ಲಿ ಮರದ ಹಲಗೆ ಅಡ್ಡಹಾಕಿ, ಅದರ ಇನ್ನೊಂದು ಬದಿಯಲ್ಲಿ ಸೌದೆ ಪೇರಿಸಲ್ಪಟ್ಟಿರುವುದನ್ನು ಒಬ್ಬ ಸಾಧು ಕಂಡುಹಿಡಿದರು. ಸರಿ, ಎಲ್ಲರೂ ಸೇರಿ ಆ ಹಲಗೆಯಲ್ಲಿ ಒಂದು ರಂಧ್ರ ಮಾಡಿ, ಅಲ್ಲಿಂದ ಸೌದೆಯನ್ನು ಒಂದೊಂದಾಗಿ ಎಳೆದುತಂದು, ಧುನಿಯನ್ನು ಹೊತ್ತಿಸಿ, ಸೆಟೆದು ಕುಳಿತರು.

ರಾತ್ರಿಯಾಗಿದೆ, ಎಲ್ಲೆಲ್ಲೂ ಗಾಢಾಂಧಕಾರ, ಧುನಿಯ ಮುಂದೆ ನಿರಾಳವಾಗಿ ಕುಳಿತು ಎಲ್ಲರೂ ಮಾತುಕತೆಯಲ್ಲಿ ತೊಡಗಿದ್ದಾರೆ. ಹೀಗಿರುವಷ್ಟರಲ್ಲಿ ದೂರದಲ್ಲಿ ಯಾರೋ ನರಳುತ್ತಿರುವ ಧ್ವನಿ ಕೇಳಿ ಬಂತು. ಇಬ್ಬರು ಸಾಧುಗಳು ಹೊರಗೆ ಹೋಗಿ ಸ್ವಲ್ಪ ಹೊತ್ತಿನಲ್ಲಿ ಮೃತಪ್ರಾಯರಾದ ವೃದ್ಧರೊಬ್ಬರನ್ನು ಹೆಗಲಮೇಲೆ ಹೊತ್ತು ತಂದರು. ಕೊರೆಯುವ ಚಳಿಯಿಂದಾಗಿ ವೃದ್ಧರ ಶರೀರವು ಮರಗಟ್ಟಿಹೋಗಿತ್ತು. ಎಲ್ಲರೂ ಸೇರಿ ವೃದ್ಧರನ್ನು ದುನಿಯ ಹತ್ತಿರ ಮಲಗಿಸಿ, ಮುತುವರ್ಜಿಯಿಂದ ಶಾಖ ಕೊಡಲಾರಂಭಿಸಿದರು. ಆಶ್ಚರ್ಯ! ಸ್ವಲ್ಪ ಹೊತ್ತಿನಲ್ಲೇ ಆ ವೃದ್ಧರು ಸ್ವಸ್ಥರಾಗಿ ಎದ್ದು ಕುಳಿತು ಎಲ್ಲರೊಡನೆ ಹಾಸ್ಯ, ತಮಾಷೆಯಲ್ಲಿ ತೊಡಗಿದರು. ಅವರೋರ್ವ ಉತ್ತರಪ್ರದೇಶದ ವೃದ್ಧ ಬಾಬಾಜಿ (ವೈಷ್ಣವ ಸಾಧು).

ಮಾರನೇ ದಿನ ಮುಂಜಾನೆಯೇ ಎದ್ದು ಎಲ್ಲರೂ ಮಂದಾಕಿನಿಯಲ್ಲಿ ಸ್ನಾನ ಮಾಡಲು ಹೊರಟರು. ಸ್ವಾಮಿ ವಿರಜಾನಂದರಿಗೆ ಇನ್ನೂ ಜ್ವರ ಬಿಟ್ಟಿರಲಿಲ್ಲ. ಆದ್ದರಿಂದ ಕೊರೆಯುವ ಚಳಿಯಲ್ಲಿ ನದೀಸ್ನಾನ ಮಾಡುವುದೇ ಬೇಡವೇ ಎಂಬ ದ್ವಂದ್ವ ಉಂಟಾಯಿತು. ಇಷ್ಟು ದೂರ ಬಂದು, ಪುಣ್ಯತೀರ್ಥದಲ್ಲಿ ಸ್ನಾನ ಮಾಡದೆ ಇರಲು ಅವರ ಮನಸ್ಸೊಪ್ಪಲಿಲ್ಲ, ಕಡೆಗೂ ಧೊಪ್ಪೆಂದು ಒಂದು ಮುಳುಗು ಹಾಕಿಯೇಬಿಟ್ಟರು. ಇಡೀ ಶರೀರವು ಮರಗಟ್ಟಿದಂತಾಯಿತು. ಸ್ನಾನಾನಂತರ ಎಲ್ಲರೂ ಬಾಬಾ ಕೇದಾರನಾಥನ ದರ್ಶನ ಮಾಡಿ, ಪೂಜಾದಿಗಳನ್ನು ನೆರವೇರಿಸಿದರು. ನಂತರ ಅಂಗಡಿಯೊಂದರಿಂದ ಬಿಸಿಬಿಸಿ ಪೂರಿಗಳನ್ನು ಕೊಂಡು ಎಲ್ಲರೂ ಆನಂದದಿಂದ ತಿಂದರು. ಕೇದಾರನಾಥನ ದರ್ಶನದ ನಂತರ ಎಲ್ಲರೂ ಬದರೀನಾಥದತ್ತ ಪ್ರಯಾಣ ಬೆಳೆಸಿದರು.

ಸ್ವಾಮಿ ವಿರಜಾನಂದರು ಮತ್ತು ಜ್ಞಾನ್ ಕೆಲವು ಕಾಲವನ್ನು ಬದರೀಕ್ಷೇತ್ರದಲ್ಲಿ ತುಂಬ ಆನಂದದಿಂದ ಕಳೆದರು. ಬ್ರಹ್ಮಚಾರಿ ಜ್ಞಾನ್ ಆಸನದಲ್ಲಿ ಕುಳಿತು, 'ದುರ್ಗಾಸಪ್ತಶತೀ' ಮುಂತಾದ ಗ್ರಂಥಗಳನ್ನು ಪಠಿಸುತ್ತಿದ್ದನು. ಯಾತ್ರಿಕರು ಪದ್ಧತಿಯಂತೆ ಅವನ ಮುಂದೆ ಕಾಣಿಕೆಯನ್ನಿಟ್ಟು ಹೋಗುತ್ತಿದ್ದರು. ಬದರಿಯ ಪವಿತ್ರ ಗಂಭೀರ ಪರಿಸರವು ಸ್ವಭಾವತಃ ಅಂತರ್ಮುಖಿಯಾದ ಕಾಳೀಕೃಷ್ಣರ ಮನದಲ್ಲಿ ನಾನಾ ಭಾವತರಂಗಗಳನ್ನು ಸಂಚಾರಗೊಳಿಸಿತ್ತು. ಕೇದಾರ-ಬದರಿಯ ಪುಣ್ಯಸ್ಮರಣೆಯನ್ನು ಹೊತ್ತು ಇಬ್ಬರು ಗುರುಭಾಯಿಗಳೂ ಮಾಯಾವತಿಗೆ ಹಿಂತಿರುಗಿದರು. ಆಶ್ರಮವಾಸಿಗಳೆಲ್ಲ ಇವರ ಯಾತ್ರೆಯ ಅನುಭವಗಳನ್ನು ಕೇಳಿ ಆನಂದಿಸಿದರು. ಯಾತ್ರೆಯಿಂದ ಹಿಂತಿರುಗಿದ ಕೆಲವು ದಿನಗಳಲ್ಲೇ ತಮ್ಮ ತಾತನಾದ ರಾಮರತನ ಬಸುವು ಆಗಸ್ಟ್‌ನಲ್ಲಿ ಪರಂಧಾಮಗೈದರೆಂಬ ವಿಷಾದದ ಸುದ್ದಿಯು ಕಾಳೀಕೃಷ್ಣರನ್ನು ತಲುಪಿತು.

* * * *

ಸ್ವಾಮೀಜಿಯವರು ಸಂಕಲ್ಪ ಮಾಡಿದ ಆದರ್ಶಗಳಿಗನುಸಾರವಾಗಿ ಅದ್ವೈತ ಆಶ್ರಮವನ್ನು ಪರಿಪೂರ್ಣವಾಗಿ ರೂಪಿಸುವುದು ಹೇಗೆ ಎಂಬ ಆಲೋಚನೆಯೇ ಮಿಸೆಸ್ ಸೇವಿಯರ್, ಸ್ವರೂಪಾನಂದ ಹಾಗೂ ಸ್ವಾಮಿ ವಿರಜಾನಂದರ ಕನಸು, ಮನಸುಗಳನ್ನಾವರಿಸಿತು. ಹೀಗಾಗಿ 'ಪ್ರಬುದ್ಧ ಭಾರತ' ಪತ್ರಿಕೆಯ ಪ್ರಚಾರವನ್ನೂ, ಚಂದಾದಾರರನ್ನೂ ಹೆಚ್ಚಿಸುವ ಉದ್ದೇಶದಿಂದ ಸ್ವಾಮಿ ವಿರಜಾನಂದರು ೧೯೦೧ರ ನವೆಂಬರ್ ಪ್ರಾರಂಭದಲ್ಲಿ ಉತ್ತರ ಮತ್ತು ಪಶ್ಚಿಮ ಭಾರತ ಪ್ರಾಂತ್ಯಗಳಿಗೆ ಹೊರಟು, ಉತ್ತರಪ್ರದೇಶ, ಪಂಜಾಬ್, ಸಿಂಧ್, ಗುಜರಾತ್ ಹಾಗೂ ಮುಂಬಯಿ ಪ್ರಾಂತ್ಯದ ಅನೇಕ ನಗರಗಳಲ್ಲಿ ಸುತ್ತಾಡಿದರು. ಪ್ರಬುದ್ಧ ಭಾರತ ಪತ್ರಿಕೆಯ ಚಂದಾದಾರರನ್ನು ಹೆಚ್ಚಿಸಲು ಹೋಗಿ ಸ್ವಾಮಿ ವಿರಜಾನಂದರು ಸುಶಿಕ್ಷಿತ ಸಮಾಜದ ವೈಚಿತ್ರ್ಯಪೂರ್ಣ ಜನರ ಸಂಪರ್ಕಕ್ಕೆ ಬರಬೇಕಾಯಿತು. ಕೆಲವೊಂದು ಕಡೆ ಶ್ರದ್ಧೆ, ಆದರಾತಿಥ್ಯಗಳನ್ನು ಪಡೆದರೆ, ಕೆಲವೆಡೆ ತೀವ್ರ ವಿರೋಧ, ನಿಂದೆ, ಬೈಗುಳಗಳನ್ನೂ ಸಹಿಸಬೇಕಾಗುತ್ತಿತ್ತು. ಇವರಂತೂ ಸಮದರ್ಶಿ ಯೋಗಿಯಂತೆ ಎದುರಾದುದೆಲ್ಲವನ್ನೂ ನಿರ್ವಿಕಾರ ಚಿತ್ತದಿಂದ ಸ್ವೀಕರಿಸುತ್ತಿದ್ದರು.

ಒಮ್ಮೆ ದೆಹಲಿಯ ದೊಡ್ಡ ಆಫೀಸೊಂದಕ್ಕೆ ಹೋದರು. ಅಲ್ಲಿನ ಕೆಲಸಗಾರರಲ್ಲಿ ಸುಮಾರು ೩೦೦ ಜನ ಬಂಗಾಳಿ ಬಾಬುಗಳಿದ್ದರು. ಸ್ವಾಮಿ ವಿರಜಾನಂದರು ಅಲ್ಲಿಗೆ ಹೋದ ಸಮಯದಲ್ಲಿ ಕೆಲವರು ಹುಕ್ಕಾ ಸೇದುತ್ತಿದ್ದರು. ಅವರು ಬಂದ ಉದ್ದೇಶವನ್ನು ತಿಳಿದಾಗ ಭೂತವನ್ನೋ, ವಿಷಸರ್ಪವನ್ನೋ ಎದುರಿಗೇ ಕಂಡವರಂತೆ ಭಯಭೀತರಾಗಿ ನೋಡತೊಡಗಿದರು. ಕೊನೆಗೊಬ್ಬ, ''ಮಹಾಶಯರೇ, ಇಲ್ಲಿ ಯಾರೂ ಚಂದಾದಾರರಾಗರು, ಬೇರೆಡೆಗೆ ಹೋಗಿ'' ಎಂದು ಕರ್ಕಶವಾಗಿ ಕಿರುಚಿದ! ಡೆಹರಾಡೂನ್‌ನಲ್ಲಿ ಒಬ್ಬ ದೊಡ್ಡ ವಕೀಲನ ಹತ್ತಿರ ಹೋದಾಗ, ಆತ, ''ನಾನೀಗ ತುಂಬ ಅವಸರದಿಂದಿದ್ದೇನೆ. ಸ್ವಲ್ಪ ಕುಳಿತಿರಿ, ಚಂದಾದಾರನಾಗುವೆ'' ಎಂದ. ಸ್ವಾಮಿ ವಿರಜಾನಂದರು ಎರಡು ಗಂಟೆಗಳ ಕಾಲ ಕುಳಿತಿದ್ದು, ಮತ್ತೆ ಆತನಿಗೆ ನೆನಪಿಸಿದಾಗ, ''ಇನ್ನೂ ಸ್ವಲ್ಪ ಕುಳಿತಿರಿ'' ಎಂದ. ಸರಿ, ಮತ್ತೆರಡು ಗಂಟೆ ಕಳೆಯಿತು. ನೋಡುತ್ತಾರೆ, ವಕೀಲ ಸಾಹೇಬ ಎದ್ದು ಒಳಗೆ ಹೋಗುತ್ತಿದ್ದಾನೆ! ಹೋಗಿ ಅವನನ್ನು ಹಿಡಿದರು. ತುಂಬ ಮೀನ ಮೇಷ ಎಣಿಸಿ ಕೊನೆಗೆ, ''ಸರಿ, ನನ್ನ ಹೆಸರನ್ನು ಬರೆದುಕೊಳ್ಳಿ'' ಎಂದ! ಪಾಟಿಯಾಲಾದ ಮಹಿಂದರ್ ಕಾಲೇಜಿನ ಅಧ್ಯಕ್ಷ ಒಬ್ಬ ಬಂಗಾಳಿ; ಸ್ವಾಮಿ ವಿರಜಾನಂದರು ಅವರ ಮನೆಯಲ್ಲಿ ಆಶ್ರಯವನ್ನು

ಕೇಳಲು ಹೋದರು. ಆತ ಮಲಗಿದ್ದರಿಂದ ನಾಲ್ಕು ಗಂಟೆ ಕಾಲ ಕಾದನಂತರ ಆತನಿಗೆ ವಿಷಯವನ್ನು ತಿಳಿಸಲಾಯಿತು. ಆದರೆ ಆತ, ''ಈ ತರಹದ ಜನರು ಅದೆಷ್ಟೋ ಬರುತ್ತಾರೆ, ಇಲ್ಲಿ ಸ್ಥಳ ಕೊಡಲು ಸಾಧ್ಯವಿಲ್ಲ'' ಎಂದು ಹೇಳಿ ಕಳುಹಿಸಿದ. ಆಗ ಸ್ವಾಮಿ ವಿರಜಾನಂದರು ತಾವು ಬಂದಿರುವ ಉದ್ದೇಶವನ್ನು ವಿವರವಾಗಿ ಬರೆದು, ಒಂದೆರಡು ದಿನ ಅಲ್ಲಿ ತಂಗುವ ಇಚ್ಛೆ ಇದೆ ಎಂಬುದನ್ನೂ ತಿಳಿಸಿ, ಚೀಟಿಯನ್ನು ಆತನಿಗೆ ಕಳುಹಿಸಿಕೊಟ್ಟರು. ಕಡೆಗೆ ಆತನಿಂದ ''ಹೋಟೆಲಿಗೆ ಹೋಗಲು ಹೇಳು'' ಎಂಬ ಹುಕುಂ ಬಂತು!

ಲಾಹೋರಿನಲ್ಲಿ ಒಬ್ಬ ಬ್ಯಾರಿಸ್ಟರ್, ಇವರ ಆಗಮನದ ಕಾರಣ ಕೇಳಿ ಅವಾಚ್ಯ ಶಬ್ದಗಳಿಂದ ಬಯ್ಯಲಾರಂಭಿಸಿದ. ಅಷ್ಟೇ ಸಾಲ ದೆಂಬಂತೆ ಚಪ್ಪಲಿಯಿಂದ ಹೊಡೆಯುವುದಾಗಿಯೂ ಬೆದರಿಸಿದ. ಹಲವೆಡೆ ಧನಿಕರಾದ ಆಶ್ರಯದಾತರು ಇವರಿಗೆ ಇರಲು ಸ್ಥಳವನ್ನೇನೋ ಕೊಟ್ಟಿದ್ದರು; ಆದರೆ ಎಲ್ಲಿ? ಸೇವಕರೊಂದಿಗೆ, ಇಲ್ಲವೆ ಕೆಲಸಕ್ಕೆ ಬಾರದ ಕೊಟ್ಟಿಗೆ, ಲಾಯಗಳಲ್ಲಿ! ಈ ಸುತ್ತಾಟದಿಂದ ಸ್ವಾಮಿ ವಿರಜಾನಂದರು ಅಗಾಧವಾದ ಅನುಭವವನ್ನು ಪಡೆದರು. ಸುಶಿಕ್ಷಿತರು ಎಂಬ ಅಭಿಮಾನವುಳ್ಳ ವ್ಯಕ್ತಿಗಳಲ್ಲಿ ಅದೆಷ್ಟರ ಮಟ್ಟಿಗೆ ನಾಸ್ತಿಕತೆ, ಭೋಗಲಾಲಸೆ, ಅಸೂಯೆ, ದ್ವೇಷ ವಿದೆ; ಭಾರತೀಯ ಧರ್ಮ, ಶಾಸ್ತ್ರ ಮತ್ತು ಸಂಸ್ಕೃತಿಯ ಬಗ್ಗೆ ಎಷ್ಟು ಅಜ್ಞಾನ ತುಂಬಿದೆ ಎಂಬುದನ್ನು ಗಮನಿಸಿದ ಸ್ವಾಮಿ ವಿರಜಾನಂದರು ಒಂದೆಡೆ ಸ್ತಂಭಿತರಾದರೆ, ಮತ್ತೊಂದೆಡೆ ಶ್ರೀರಾಮಕೃಷ್ಣ ಹಾಗೂ ವಿವೇಕಾನಂದರ ಜೀವನ, ಸಂದೇಶಗಳು ಸದ್ದಿಲ್ಲದೆ ಜನರ ನರನಾಡಿಗಳಲ್ಲಿ ಪ್ರವಹಿಸಿ, ಭಾರತೀಯ ಸಮಾಜವನ್ನೂ, ಸಂಸ್ಕೃತಿಯನ್ನೂ ಅವುಗಳು ಆಶ್ಚರ್ಯಕರವಾದ ರೀತಿಯಲ್ಲಿ ಹೇಗೆ ಪ್ರಭಾವಿಸುತ್ತಿವೆ ಎಂಬುದಕ್ಕೆ ಹಲವಾರು ನಿದರ್ಶನಗಳನ್ನು ಕಂಡು ಭರವಸೆ, ಆನಂದಗಳಿಂದ ಅವರ ಹೃದಯ ತುಂಬಿ ಬಂತು.

ವಿರಜಾನಂದರು ಮಥುರೆಯಿಂದ ಬೃಂದಾವನಕ್ಕೆ ಹೋಗಿ ತಮ್ಮ ತಾಯಿಯನ್ನು ನೋಡಿಕೊಂಡು ಬಂದರು. ತಂದೆಯ ಮರಣಾನಂತರ ಇದೇ ಮೊದಲು ಅವರನ್ನು ನೋಡುತ್ತಿರುವುದು. ಅಲ್ಲಿ ತಾಯಿ ಬಹಳ ಶಾಂತಿಯಿಂದಿದ್ದುದನ್ನು ಸ್ವಾಮಿ ವಿರಜಾನಂದರು ಕಂಡರು. ಅವರೊಬ್ಬರೇ ಒಂದು ಚಿಕ್ಕ ಮನೆಯಲ್ಲಿ ವಾಸವಾಗಿದ್ದು, ತಾವೇ ಅಡಿಗೆಯನ್ನು ಮಾಡಿಕೊಳ್ಳುತ್ತಿದ್ದರು. ಬಹಳಷ್ಟು ಸಮಯವನ್ನು ಅವರು ಭಗವಚ್ಚಿಂತನೆಯಲ್ಲಿ ಕಳೆಯುತ್ತಿದ್ದರು.

ಸ್ವಾಮಿ ಕಲ್ಯಾಣಾನಂದರ ಪ್ರಯತ್ನದಿಂದ ಕಂಖಲ್‌ನಲ್ಲಿ ಕೆಲವು ಸಮಯದ ಹಿಂದೆಯಷ್ಟೇ ಒಂದು ಸೇವಾಶ್ರಮವು ಸ್ಥಾಪಿತವಾಗಿತ್ತು. ವಿರಜಾನಂದರು ಡೆಹರಾಡೂನ್‌ಗೆ ಹೋಗುವಾಗ ದಾರಿಯಲ್ಲಿ ಕಂಖಲ್ಲನ್ನು ನೋಡಿಕೊಂಡು ಬರಲು ಹೋದರು. ಸುಶೀಲರು (ಪ್ರಕಾಶಾನಂದ) ಆಗ ಅಲ್ಲಿದ್ದರು. ವಿರಜಾನಂದರನ್ನು ಕಂಡು ಆ ಗುರುಭಾಯಿಗಳಿಗೆ ತುಂಬ ಸಂತೋಷವಾಯಿತು. ಅಲ್ಲಿಯ ಸೇವಾಶ್ರಮಕ್ಕಾಗಿಯೂ ಹಣವನ್ನು ಸಂಗ್ರಹಿಸುವ ಜವಾಬ್ದಾರಿಯನ್ನು ವಿರಜಾನಂದರು ಹೊತ್ತರು. ಕಂಖಲ್‌ನಿಂದ ಅವರು ಸ್ವಲ್ಪ ದಿನಗಳ ಮಟ್ಟಿಗೆ ಹೃಷೀಕೇಶಕ್ಕೆ ಹೋಗಿದ್ದರು. ಅಲ್ಲಿ ಗಂಗಾತಟದ ಝೂಡಿ ಎಂಬ ಪ್ರಶಸ್ತ ಸ್ಥಳದಲ್ಲಿ ಸುಮಾರು ಒಂದು ಸಾವಿರದಷ್ಟು ಮಂದಿ ಸಾಧುಗಳು ಹುಲ್ಲಿನ ಚಿಕ್ಕ ಚಿಕ್ಕ ಜೋಪಡಿಗಳನ್ನು ಕಟ್ಟಿಕೊಂಡು ವಾಸಿಸುತ್ತಿದ್ದರು. ಹೃಷೀಕೇಶದ ಪ್ರಶಾಂತ ಆಧ್ಯಾತ್ಮಿಕ ಪರಿಸರವು ವಿರಜಾನಂದರನ್ನು ಮುಗ್ಧಗೊಳಿಸಿತು. ಉಳಿದ ಎಲ್ಲ ಕೆಲಸಗಳನ್ನೂ ಬಿಟ್ಟು, ಕೆಲಕಾಲ ಅಲ್ಲಿದ್ದು ತಪಸ್ಸನ್ನಾಚರಿಸುವ ಪ್ರಬಲ ಆಕಾಂಕ್ಷೆ ಅವರ ಮನದಲ್ಲಿ ಎದ್ದಿತು. ಆದರೆ ಸ್ವಾಮೀಜಿಯವರ ಆದೇಶವನ್ನು ನೆನಪಿಸಿಕೊಂಡು ಅವರು ತಮ್ಮ ಪ್ರಬಲ ಇಚ್ಛೆಯನ್ನು ಹತೋಟಿಗೆ ತಂದುಕೊಂಡರು.

ಸ್ವಾಮಿ ವಿರಜಾನಂದರು ಗುಜರಾನ್‌ವಾಲಾಗೆ ಹೋದಾಗ ಅಲ್ಲೊಬ್ಬ ಕಟ್ಟಾ ಅದ್ವೈತವಾದಿಯೊಬ್ಬರನ್ನು ಕಂಡರು; ಹೆಸರು ಸ್ವಾಮಿ ಹಂಸರಾಜ ಎಂದು. ಅವರ ಹಿಂದಿನ ಹೆಸರು ಸ್ವರೂಪಾನಂದ ಸರಸ್ವತಿ ಎಂದೂ, ಸ್ವಾಮಿ ವಿವೇಕಾನಂದರೇ ಅವರಿಗೆ ಹಂಸರಾಜನೆಂಬ ಹೆಸರನ್ನು ನೀಡಿರುವುದಾಗಿಯೂ ಅವರು ತಿಳಿಸಿ, ಪ್ರಮಾಣಕ್ಕಾಗಿ ಒಂದು ತುಂಡು ಕಾಗದವನ್ನು ಸ್ವಾಮಿ ವಿರಜಾನಂದರಿಗೆ ತೋರಿಸಿದರು. ಅದರಲ್ಲಿ ಇಂಗ್ಲಿಷ್ ಹಾಗೂ ಸಂಸ್ಕೃತದಲ್ಲಿ, 'ಇಂದಿನಿಂದ ಸ್ವಾಮಿ ಸ್ವರೂಪಾನಂದ ಸರಸ್ವತಿಯು ಸ್ವಾಮಿ ಹಂಸರಾಜನೆಂಬ ಹೆಸರಿನಿಂದ ಖ್ಯಾತರು' ಎಂದು ಬರೆದಿತ್ತು. ಅದರ ಕೆಳಗೆ ಸ್ವಾಮೀಜಿಯವರ ಹಸ್ತಾಕ್ಷರವಿತ್ತು. ಆ ಸಾಧು ಕಠೋರ ಅದ್ವೈತವಾದಿ. ಶ್ರೀಕೃಷ್ಣ, ಶಂಕರ, ಚೈತನ್ಯ ಮುಂತಾದವರನ್ನು ಅವತಾರವೆಂದು ಒಪ್ಪುತ್ತಿರಲಿಲ್ಲ. ತಾನು 'ಸಿದ್ಧ'ನಾಗಿ ಬಿಟ್ಟಿರುವೆನೆಂಬ ಭಾವನೆ ಅವನ ತಲೆಗೇರಿತ್ತು. ಗುಜರಾನ್‌ವಾಲಾದಲ್ಲಿ ಸ್ವಾಮಿ ವಿರಜಾನಂದರು ಇಳಿದುಕೊಂಡಿದ್ದು ಒಬ್ಬ ವಯಸ್ಕನಾದ ಬಂಗಾಳಿ ಇಂಜಿನಿಯರ್‌ನ ಮನೆಯಲ್ಲಿ. ತಾನು ಶ್ರೀರಾಮಕೃಷ್ಣರು ಉದಾಹರಿಸಿದಂತಹ ನಿರ್ಲಿಪ್ತ ಸಂಸಾರಿಯ ಆದರ್ಶವನ್ನು ಪಾಲಿಸುತ್ತಿರುವುದಾಗಿ ಆತ ಹೇಳಿಕೊಳ್ಳುತ್ತಿದ್ದ. ಆತನ ವಯಸ್ಸು ಆಗ ಅರುವತ್ತಿರಬಹುದು. ಆದರೆ ಆತನ ಚಿಕ್ಕ ಮಗನ ವಯಸ್ಸು ಅಬ್ಬಬ್ಬಾ ಎಂದರೆ ಒಂದು ವರ್ಷ. 'ನಿರ್ಲಿಪ್ತ ಸಂಸಾರಿಯೇ ಸರಿ!' ಎಂದುಕೊಂಡರು ಸ್ವಾಮಿ ವಿರಜಾನಂದರು. ಶಿಕಾರ್‌ಪುರದಲ್ಲಿ ಸ್ವಾಮಿ ವಿರಜಾನಂದರು ಆರ್ಯಸಮಾಜದ ಅನೇಕ ಮಂದಿ ಪ್ರಚಾರಕರನ್ನು ಭೇಟಿಯಾದರು. ಅವರೆಲ್ಲ 'ನೀನು ನಮ್ಮೊಂದಿಗೇ ಸೇರಿಕೊಂಡುಬಿಡು. ನಿನ್ನಂತಹ ಒಬ್ಬನಿದ್ದರೆ ನಾವು ಇನ್ನೂ ಬಹಳಷ್ಟು ಕೆಲಸಮಾಡಬಹುದು' ಎಂದು ಪೀಡಿಸಲಾರಂಭಿಸಿದರು. ಅವರಲ್ಲೊಬ್ಬ, ''ನಿನಗೆ ಮುಕ್ತಿಯೇನಾದರೂ ಬೇಕಿದ್ದರೆ ಆರ್ಯಸಮಾಜಕ್ಕೆ ಸೇರು!'' ಎಂದು ಹೇಳಿಯೇ ಬಿಟ್ಟ.

*(ಮುಂದುವರಿಯುವುದು)*

# ಕರ್ಮಯೋಗ ಮತ್ತು ಶರಣಾಗತಿ

ಪುಷ್ಪಾ ಶೇಷಾದ್ರಿ

ಆಧ್ಯಾತ್ಮಿಕ ಸಾಧನೆಯನ್ನು ಆಚರಣೆಯಲ್ಲಿ ತರುವುದಕ್ಕೆ ಅತ್ಯಂತ ಪರಿಣಾಮಕಾರಿ ಮಾರ್ಗವೇ ಕರ್ಮ ಮತ್ತು ಭಕ್ತಿ. ಗೀತೆಯ ಸಾರಸರ್ವಸ್ವ ಇದೇ ಆಗಿದೆ. ಈ ವಿಚಾರವನ್ನು ಇಲ್ಲಿ ವಿವರಿಸಿರುವ ಲೇಖಕಿ ಮೈಸೂರು ಆಶ್ರಮದ ಭಕ್ತರು. ಕೆಲವು ಪುಸ್ತಕಗಳನ್ನೂ ರಚಿಸಿರುವ ಅವರ ಹಲವು ಲೇಖನಗಳು ಈ ಪತ್ರಿಕೆಯಲ್ಲಿ ಪ್ರಕಟವಾಗಿವೆ.

ಭಗವದ್ಗೀತೆಯಲ್ಲಿ ಕರ್ಮಯೋಗಕ್ಕೆ ಬಹಳ ಪ್ರಾಮುಖ್ಯತೆ ಇದೆ. ಪ್ರತಿಯೊಬ್ಬ ಮಾನವನು, ಕರ್ಮಮಾಡದೆ ಇರಲು ಸಾಧ್ಯವಿಲ್ಲ. ಆದರೆ ಅದನ್ನು ಯೋಗವನ್ನಾಗಿ ಮಾಡುವುದು ಹೇಗೆ ಎಂಬುದನ್ನು ಗೀತೆಯಲ್ಲಿ ಶ್ರೀಕೃಷ್ಣನು ತಿಳಿಸಿರುವನು.

ಕರ್ಮವನ್ನು ಮೂರು ಭಾಗವಾಗಿ ವಿಂಗಡಿಸಬಹುದು.

**೧. ಕಾಮ್ಯ ಕರ್ಮ:** ಇದನ್ನು ಮಾಡಿದರೆ ಕರ್ಮಕ್ಕನುಗುಣವಾಗಿ ಫಲ ದೊರೆಯುವುದು. ಮಾಡದಿದ್ದರೂ ದೋಷವೇನಿಲ್ಲ.

**೨. ನಿತ್ಯ ನೈಮಿತ್ತಿಕ ಕರ್ಮ:** ಇದು ದಿನನಿತ್ಯ ನಮ್ಮ ಸ್ಥಾನಕ್ಕೆ ಅನುಗುಣವಾಗಿ ನಾವು ಮಾಡುವ ಕರ್ತವ್ಯ; ಧಾರ್ಮಿಕ ಚಟುವಟಿಕೆಗಳು, ಕುಟುಂಬ ನಿರ್ವಹಣೆ ಇತ್ಯಾದಿಗಳು. ಇವು ನಾವು ಮಾಡಲೇ ಬೇಕಾದ ಕೆಲಸಗಳು, ಮಾಡದಿದ್ದರೆ ದೋಷ.

**೩. ನಿಷಿದ್ಧ ಕರ್ಮ:** ಇದು ದುರುದ್ದೇಶದಿಂದ ಕೂಡಿದ ಕರ್ಮ. ಇದನ್ನು ಮಾಡಿದರೆ, ಯಾವ ರೀತಿಯಿಂದಲಾದರೂ ಸರಿ, ಅದರ ದುಷ್ಫಲವನ್ನು ಅನುಭವಿಸಬೇಕಾಗುವುದು.

'ಯೋಗ'ವೆಂದರೆ, ಜೀವಾತ್ಮ-ಪರಮಾತ್ಮನನ್ನು ಒಂದುಗೂಡಿಸುವುದು. ಇದನ್ನು ಮಾಡಬೇಕಾದರೆ, ಅಹಂಕಾರ, ವ್ಯಾಮೋಹ ಮತ್ತು ಮಾಯೆಯಿಂದ ದೂರವಿರಲು ಪ್ರಯತ್ನಿಸಬೇಕು. ಕರ್ಮವೆಂದರೆ ಕೆಲಸ. ಕೆಲವೊಂದು ಕರ್ಮದಿಂದ ಮಾನವನು ಬಂಧನಕ್ಕೊಳಗಾಗುವನು. ಯಾವ ರೀತಿ ಕರ್ಮವನ್ನು ಮಾಡಿ, ಅದರ ಬಂಧನದಿಂದ ಹೊರಬರಲು ಸಾಧ್ಯವೋ, ಅದೇ ಕರ್ಮಯೋಗವೆನಿಸುವುದು. ಅಂದರೆ ಕರ್ಮವನ್ನು ಕೇವಲ ಕರ್ತವ್ಯ ಭಾವದಿಂದ ಮಾಡಬೇಕೇ ಹೊರತು, ಅದರಿಂದ ಬರುವ ಫಲದ ಕಡೆ ಗಮನ ಕೊಡಬಾರದು. ಹಾಗೆಂದು ಕರ್ಮವನ್ನು ಕಡೆಗಣಿಸಲಾಗದು. ಪಾಲಿಗೆ ಬಂದ ಕರ್ಮ(ಕರ್ತವ್ಯ)ವನ್ನು ನಿಷ್ಠೆಯಿಂದ ಮಾಡಿದರೆ, ಮನಸ್ಸು ಕ್ರಮೇಣ ಪವಿತ್ರವಾಗುವುದು.

ಇದು ಗೀತೆಯಲ್ಲಿ ಬರುವ ಅಸದೃಶವಾದ ಸಂದೇಶ. ಚಿತ್ತಶುದ್ಧಿಯಿಂದ ಜ್ಞಾನ ಮತ್ತು ಭಕ್ತಿಗೆ ದಾರಿಯಾಗುವುದು. ಪರಮಾರ್ಥ ಕರ್ಮ, ಪರರಿಗಾಗಿ ಮಾಡುವ ಕಾರ್ಯ. ಸ್ವಾರ್ಥ ಕರ್ಮ, 'ತನಗೇನು ಇದರಿಂದ ಲಾಭ?' ಎಂದು ಮಾಡುವುದು.

ಪರಮಾರ್ಥ ಕರ್ಮ, ತಾನು ಏನು ಮಾಡಿದರೂ, ದೇವರಿಗಾಗಿ ಮಾಡುವೆನು ಎಂಬ ಭಾವನೆಯಿಂದ ಮಾಡುವುದು. ಅದು ನಮ್ಮ ಶ್ರಮದಾನವಿರಬಹುದು, ವಿದ್ಯಾದಾನ, ಅನ್ನದಾನ ಇತ್ಯಾದಿ. ಮನಸ್ಸು ಪವಿತ್ರವಾದರೆ, ಇದರಿಂದ ನಾವು ಮಾಡುವ ಕಾರ್ಯ ಸಹ ಪವಿತ್ರವಾಗಿರುವುದು.

ಗೀತೆಯ ಹನ್ನೆರಡನೆಯ ಅಧ್ಯಾಯದಲ್ಲಿ, ಭಗವಂತನು ಮಾನವನಿಗೆ ನಾಲ್ಕು ಮಾರ್ಗವನ್ನು ತಿಳಿಸಿ, ಸಂಸಾರ ಬಂಧನದಿಂದ ಹೇಗೆ ಮುಕ್ತರಾಗಬಹುದು ಎಂಬುದನ್ನು ವಿವರಿಸಿರುವನು.

೧. ಮನಸ್ಸು, ಬುದ್ಧಿಗಳನ್ನು ಸಂಪೂರ್ಣವಾಗಿ ಭಗವಂತನಲ್ಲಿ ಇರಿಸಿದರೆ, ಸಂಸಾರಸಾಗರದಿಂದ ಮುಕ್ತಿ ದೊರೆಯುವುದು. ಮನಸ್ಸಿನ ಸ್ವಭಾವವೇ ಸದಾ ಏನನ್ನಾದರೂ ಚಿತ್ರಿಸಿಕೊಳ್ಳುವುದು. ಬದಲು ದೇವರ ವಿಷಯವಾಗಿ ಚಿತ್ರಿಸಿಕೊಳ್ಳುವ ಅಭ್ಯಾಸವನ್ನು ಮಾಡಬೇಕು. ಅಂತೆಯೇ ಬುದ್ಧಿಯನ್ನು ಸಹ ಭಗವಂತನಿಗೆ ಅರ್ಪಣೆ ಮಾಡಬೇಕು. ಯಾವಾಗ ಈ ಮನಸ್ಸು, ಬುದ್ಧಿ, ಆದಷ್ಟೂ ಭಗವಂತನ ಚಿಂತೆಯಲ್ಲಿರುವುದೋ, ಆಗ ದೇವರ ಸಾನ್ನಿಧ್ಯವನ್ನು ಅನುಭವಿಸಬಹುದು. ಆದರೆ ಇದು ಸ್ವಲ್ಪ ಕಷ್ಟಕರ.

೨. ಇದು ಸಾಧ್ಯವಿಲ್ಲದಿದ್ದರೆ ಎರಡನೇ ಮಾರ್ಗ – 'ಅಭ್ಯಾಸ ಯೋಗ'. ಒಂದು ನಿರ್ದಿಷ್ಟ ವೇಳೆಯಲ್ಲಿ ಪ್ರತಿನಿತ್ಯ ತಪ್ಪದೆ, ಎಲ್ಲಾ ಆಲೋಚನೆಗಳನ್ನು ಬಿಟ್ಟು, ಭಗವಂತನನ್ನು ಧ್ಯಾನಿಸುವುದು ಮತ್ತು ಅವನ ನಾಮಜಪ ಮಾಡುವುದು. ಕ್ರಮೇಣ ಅಭ್ಯಾಸ ಯೋಗವಾಗುವುದು. ಇದನ್ನು ಪ್ರತಿದಿನ ವೇಳಾಪಟ್ಟಿಯಂತೆ ಮಾಡಿದರೆ, ಅಭ್ಯಾಸಯೋಗವನ್ನು ಸಾಧಿಸಬಹುದು.

೩. ಈ ರೀತಿ ಅಭ್ಯಾಸಯೋಗವನ್ನು ಮಾಡಲಾಗದಿದ್ದರೆ, ದೇವರಿಗೆ ಸಂಬಂಧಪಟ್ಟ ಕಾರ್ಯವನ್ನು ಮಾಡಬೇಕು. ಅಂದರೆ, ಪ್ರತಿದಿನ ಪೂಜೆ, ಅದಕ್ಕಾಗಿ ಹೂವು ಕೀಳುವುದು, ದೇವಾಲಯವನ್ನು ಸ್ವಚ್ಛವಾಗಿಡುವುದು. ದೇವರ ವಿಷಯ ಕುರಿತು ಓದುವುದು, ಮತ್ತೊಬ್ಬರಲ್ಲಿ ಆ ವಿಷಯವಾಗಿ ಮಾತಾಡುವುದು. ಏನು ಮಾಡಿದರೂ ಅದು ನಿನಗರ್ಪಿತ ಎಂಬ ಭಾವನೆಯಿಂದ ಮಾಡುವುದು.

ನಾವು ತಪ್ಪುಮಾಡಬಹುದು ಅಥವಾ ಒಳ್ಳೆಯ ಕೆಲಸವನ್ನೇ ಮಾಡಬಹುದು. ಏನೇ ಇರಲಿ, ಭಗವದರ್ಪಣೆ (ಕೃಷ್ಣಾರ್ಪಣವೆಂದು)ಯಾಗಿ ಮಾಡಿದರೆ, ಕ್ರಮೇಣ, 'ನಾನು ತಪ್ಪುಮಾಡಿ, ಭಗವಂತನಿಗೆ ಅರ್ಪಿಸಿದೆನಲ್ಲಾ' ಎಂದು ಮನಸ್ಸಿಗೆ ಖೇದಉಂಟಾಗುವುದು. ಇದನ್ನು ತಿದ್ದಿಕೊಂಡರೆ, ಕ್ರಮೇಣ ಮನಸ್ಸು ಮತ್ತೆ ಆ ರೀತಿ ತಪ್ಪುಮಾಡುವುದಿಲ್ಲ.

೪. ಮೇಲಿನದನ್ನು ಮಾಡಲು ಸಾಧ್ಯವಿಲ್ಲವಾದರೆ, ಕೊನೆಯ ಮಾರ್ಗವಾಗಿ 'ಕರ್ಮಫಲತ್ಯಾಗ' ಮಾಡಿ ಎನ್ನುವನು. ಕರ್ತವ್ಯ ಮಾಡಲು ಮಾತ್ರ ನಮಗೆ ಅಧಿಕಾರ, ಆದರೆ ಫಲಾಪೇಕ್ಷೆಯಲ್ಲಿ ನಮಗೆ ಅಧಿಕಾರವಿಲ್ಲ. ಯಾವಾಗ ನಾವು ಫಲಾಪೇಕ್ಷೆಯನ್ನು ತ್ಯಜಿಸುವೆವೋ ಆಗ ನಾವು ಕರ್ಮ ಮಾಡಿದರೂ, ಅದರ ಬಂಧನಕ್ಕೊಳಗಾಗುವುದಿಲ್ಲ.

ನಾವು ಹಲವು ಜನ್ಮಗಳ ಸಂಸ್ಕಾರಗಳ ಸಮೇತ ಈ ಜನ್ಮ ಪಡೆದಿರುತ್ತೇವೆ. ಆ ಸಂಸ್ಕಾರಗಳಿಗೆ ಅನುಗುಣವಾಗಿ ಕೆಲಸ ಮಾಡುತ್ತಾ, ಮತ್ತಷ್ಟು ಸಂಸ್ಕಾರವನ್ನು ಪಡೆಯುತ್ತೇವೆ. ಇದು ಹಾಗೇ 'ಜಮಾ' ಆಗುತ್ತಾ ಹೋಗುವುದು. ನಮಗೆ ದೇವರು ಕರುಣಿಸಿರುವ ವಿವೇಕ, ಬುದ್ಧಿಯಿಂದ ಈ ಕರ್ಮ ಬಂಧನದಿಂದ ಬಿಡಿಸಿಕೊಳ್ಳುವ ಪ್ರಯತ್ನ ಮಾಡಬೇಕು. ನಾವು ಫಲಾಪೇಕ್ಷೆಯಿಂದ ಮಾಡಿದರೆ, ಸಂಸ್ಕಾರಗಳು ವೃದ್ಧಿಯಾಗುತ್ತವೆ. ನಿಷ್ಕಾಮಭಾವದಿಂದ ಮಾಡಿದರೆ, ಹೊಸ ಸಂಸ್ಕಾರಗಳು ಉಂಟಾಗುವುದಿಲ್ಲ. ಹೀಗೆ ಕ್ರಮೇಣ ಕರ್ಮಬಂಧನದಿಂದ ಪಾರಾಗಬಹುದು. ನಂತರ, ಕರ್ಮ ಮಾಡಿದರೂ ಅದು ಬಂಧನವಾಗುವುದಿಲ್ಲ.

ಒಂದು ಕಟ್ಟಡ ಕಟ್ಟಲು ಸಿಮೆಂಟು, ಕಲ್ಲು, ಮರಳು ಇತ್ಯಾದಿ ಎಲ್ಲವನ್ನೂ ಒಂದು ನಿರ್ದಿಷ್ಟ ಪ್ರಮಾಣದಲ್ಲಿ ಸೇರಿಸಿ ಕಟ್ಟಿದರೆ, ಕಟ್ಟಡವು ಗಟ್ಟಿಯಾಗುವುದು. ಅಂತೆಯೇ, ಉತ್ತಮ ಆಧ್ಯಾತ್ಮಿಕ ಸಂಸ್ಕಾರಗಳ ಕಟ್ಟಡವನ್ನು ನಿರ್ಮಾಣಮಾಡಲು, ಸತ್ಸಂಗ, ಪವಿತ್ರತೆ, ಸಂಕಷ್ಟದಲ್ಲಿರುವವರಿಗೆ ಸಹಾಯ, ಅನುಕಂಪ, ಧ್ಯಾನ, ಜಪ, ಎಲ್ಲವೂ ಸೇರಿದರೆ ಜನ್ಮ ಸಾರ್ಥಕ.

ಶ್ರೀ ಚೈತನ್ಯ ಪ್ರಭು ಸದಾ ನಾಮಸಂಕೀರ್ತನೆ ಮಾಡುವುದರಲ್ಲಿ ತಲ್ಲೀನರಾಗಿದ್ದರು. ಒಮ್ಮೆ ಅವರು ''ಗೋವಿಂದಾ'' ಎಂದು ಹೇಳುತ್ತ, ಒಬ್ಬ ಅಗಸನ ಮನೆಯ ಮುಂದೆ ಹೋಗಬೇಕಾಯಿತು. ಆಗ ಚೈತನ್ಯರು, ಅಗಸನಿಗೆ, ''ಬಾ ಒಮ್ಮೆ ನನ್ನ ಜೊತೆ, ಗೋವಿಂದನ ನಾಮಸ್ಮರಣೆಮಾಡು'' ಎನ್ನುವರು. ಆಗ ಅಗಸನು ಚೈತನ್ಯರನ್ನು ಕುರಿತು, ''ನಿಮಗೆಲ್ಲೋ ಹುಚ್ಚು ಹಿಡಿದಿರಬೇಕು, ನಾನು ನನ್ನ ಕೆಲಸವನ್ನು ಬಿಟ್ಟು ಬರಲಾರೆ'' ಎಂದನು. ಅದಕ್ಕೆ ಚೈತನ್ಯರು ''ಒಂದೇ ಒಂದು ಸಲ ನನ್ನ ಜೊತೆ ಬಂದು, ಸಂಕೀರ್ತನೆ ಮಾಡಿ ನೋಡು'' ಎಂದು ಬಲವಂತ ಮಾಡಿದರು. ಆಗ ಅಗಸನು ಒಗೆಯುತ್ತಿದ್ದ ಬಟ್ಟೆಯನ್ನು ಬಿಸಾಕಿ, ಚೈತನ್ಯರ ಜೊತೆ ಕೀರ್ತನೆಗೆ ಸೇರಿ, ಒಮ್ಮನಸ್ಸಿನಿಂದ ಗೋವಿಂದನ ನಾಮವನ್ನು ಹೇಳಲು, ತನಗೆ ತಿಳಿಯದಂತೆಯೆ ನಾಮಸಂಕೀರ್ತನೆಯಲ್ಲಿ ಮುಳುಗಿಹೋದನು. ನಂತರ, ಅವನ ಪತ್ನಿ ಕಸ ಗುಡಿಸುತ್ತಿದ್ದುದನ್ನು ನೋಡಿ, ಅಗಸನು ಅವಳನ್ನೂ ''ನಾಮಸಂಕೀರ್ತನೆಗೆ ಬಾ'' ಎಂದು ಕರೆದನು. ಆದರೆ ಅವಳು, ಬರುವುದಿಲ್ಲವೆಂದು ಹಠ ಮಾಡಿದಳು. ಅಗಸನು, ''ಒಂದೇ ಒಂದು ಸಲ ಬಾ'' ಎನ್ನಲು, ಅವಳು ಅವನ ಬಲವಂತಕ್ಕೆ ಪೊರಕೆಯನ್ನು ಬಿಸಾಡಿ, ಚೈತನ್ಯರ ಗುಂಪಿನಲ್ಲಿ ಸೇರಿ, ನಾಮಭಜನೆಗೆ ಸೇರಿದಳು. ಹೀಗೆ ಸತ್ಸಂಗ, ಜಪ, ಭಜನೆ, ಉತ್ತಮರ ಸಂಗ, ಮನಸ್ಸನ್ನು ಪರಿವರ್ತಿಸುವುದು.

**''ಸಜ್ಜನರ ಸಂಗವದು, ಹೆಜ್ಜೇನು ಸವಿದಂತೆ''** ಎಂಬ ಸರ್ವಜ್ಞನ ನುಡಿಯನ್ನು ಇಲ್ಲಿ ಸ್ಮರಿಸಬಹುದು.

**ಒಮ್ಮೆ ಹೂದೋಟದಲಿ ಒಮ್ಮೆ ಕೆಳೆಕೂಟದಲಿ ।**
**ಒಮ್ಮೆ ಸಂಗೀತದಲಿ ಒಮ್ಮೆ ಶಾಸ್ತ್ರದಲಿ ।**
**ಒಮ್ಮೆ ಸಂಸಾರದಲಿ ಮತ್ತೊಮ್ಮೆ ಮೌನದಲಿ ।**
**ಬ್ರಹ್ಮಾನುಭವಿಯಾಗೊ — ಮಂಕುತಿಮ್ಮ ॥**

ಎಂಬ ಡಿ.ವಿ.ಜಿ.ಯವರ ಮಾತಿನಂತೆ ವಿವೇಕದಿಂದ ವರ್ತಿಸಿ, ಈ ಜನ್ಮವನ್ನು ಸಾರ್ಥಕಮಾಡಿಕೊಳ್ಳುವಂತೆ ಒಂದು ಅವಕಾಶವನ್ನು ಪರಮಾತ್ಮನು ಕರುಣಿಸಿರುವನು.

### ಶರಣಾಗತಿ – ಶ್ರೀರಾಮಾನುಜರ ವಿಶಿಷ್ಟಾದ್ವೈತ ಮತದಂತೆ

ಶರಣಾಗತಿಯು ಒಂದು ಮಾರ್ಗ. ಅದು, ಈ ಕಲಿಯುಗದಲ್ಲಿ ಬಹಳ ಕಷ್ಟ. ಆದರೂ ಮುಖ್ಯ. ''ಸಂಕಟ ಬಂದಾಗ ವೆಂಕಟರಮಣ'' ಎನ್ನುವುದು ಎಲ್ಲರಿಗೂ ತಿಳಿದ ವಿಷಯ. ಕಷ್ಟವಾಗಲಿ, ಸುಖವಾಗಲಿ, ದೇವರಲ್ಲಿ ಒಂದೇ ರೀತಿ ಶರಣಾಗಬೇಕು. ಪರಮಾತ್ಮನಿಗೆ ಏನು ಬೇಕು? ನಾವೇನು ಕೊಡಬಲ್ಲೆವು? ಅವನೇ ಎಲ್ಲರಿಗೂ ಬೇಕಾದುದನ್ನು ಒದಗಿಸುವನು. ದೇವರಿಗೆ ಬೇಕಾಗಿರುವುದು, ನಮ್ಮ ಪವಿತ್ರ ಮನಸ್ಸಿನ ಅನನ್ಯ ಭಕ್ತಿ ಮತು ಶ್ರದ್ಧೆ.

ತುಂಬಿದ ಸಭೆಯಲ್ಲಿ ದ್ರೌಪದಿ ತನ್ನನ್ನು ತಾನು ರಕ್ಷಿಸಿಕೊಳ್ಳುವೆನೆಂತಿದ್ದಳು. ಆದರೆ ಅವಮಾನದ ಪರಾಕಾಷ್ಠೆ ಬಂದಾಗ, ತನ್ನ ಎರಡೂ ಕೈಗಳನ್ನು ಎತ್ತಿ, ''ಕೃಷ್ಣಾ, ನನಗೆ ಅವಮಾನವಾದರೆ, ಅದು ನಿನಗೂ ಆದಂತೆ, ನೀನೇ ಗತಿ ರಕ್ಷಿಸಬೇಕು'' ಎಂದು, ಅನನ್ಯಭಕ್ತಿಯಿಂದ ಶ್ರೀಕೃಷ್ಣನಲ್ಲಿ ಸಂಪೂರ್ಣ ಶರಣಾದಾಗ, ಅವನು ಆಕೆಗೆ ಅಕ್ಷಯವಸನವನ್ನು ಇತ್ತು ಕಾಪಾಡಿದ.

ಪ್ರಹ್ಲಾದನ ವಿಷಯ ಸಹ ಎಲ್ಲರಿಗೂ ತಿಳಿದಿದ್ದೆ. ಬೆಂಕಿಯಲ್ಲಾಗಲಿ, ಆನೆಯ ತುಳಿತದಿಂದಾಗಲಿ, ನೀರಿನಲ್ಲಿ ಮುಳುಗಿಸಿದರೂ, ಸ್ವಲ್ಪವೂ ವಿಚಲಿತನಾಗದೆ, ವಿಷ್ಣು ತನ್ನನ್ನು ರಕ್ಷಿಸುವನೆಂಬ ಭರವಸೆಯಿಂದ, ಸಂಪೂರ್ಣವಾಗಿ ಶರಣಾದನು.

ಒಮ್ಮೆ ನೋಡಿದರೆ, ಸಂಕಟ ಪರಿಸ್ಥಿತಿ ಬರುವುದೂ ಒಳ್ಳೆಯದೆ. ಮಾನವನು, ಪ್ರಾಪಂಚಿಕ ವಿಷಯದಲ್ಲಿ ಮುಳುಗದೆ, ತನ್ನ ಕಡೆ ಬರಲೆಂದೇ ಪರಮಾತ್ಮನು ಈ ರೀತಿ ಸಂದರ್ಭ ತರುವನು. ಶರಣಾಗತಿಯ ಮಾರ್ಗ ಹಿಡಿದರೆ, ನಾವು ತಪ್ಪುಮಾಡಲು ಸಾಧ್ಯವಿಲ್ಲ. 'ಶರಣಾಗಿದ್ದೇನೆ' ಎಂದು ಬರಿ ಬಾಯಿ ಮಾತಿನಲ್ಲಿ ಹೇಳದೆ, ಮನಸಾರೆ ಎಲ್ಲವನ್ನೂ ಅವನ ಪಾದದಲ್ಲಿ ಅರ್ಪಿಸಿದರೆ ಭಗವಂತನ ಒಂದು 'ಕಾಣದ ಕೈ' ನಮ್ಮನ್ನು ಸದಾ ಹಿಡಿದೆತ್ತುವುದರಲ್ಲಿ ಸಂಶಯವಿಲ್ಲ. ಗೀತೆಯ ಅಭ್ಯಾಸಯೋಗದಲ್ಲಿ ಹೇಳಿರುವಂತೆ ನಡೆದರೆ, ಶರಣಾಗತಿ ಸಾಧ್ಯ. ಮಾನವನು ನೆನೆದದ್ದು ನಡೆಯುವುದಿಲ್ಲ, ನಡೆಯುವುದನ್ನು ನೆನೆಯಲಾಗುವುದಿಲ್ಲ. ಆದ್ದರಿಂದ ಶರಣಾಗತಿಯೊಂದೇ ನಮ್ಮ ರಕ್ಷಣೆ. ✶



# ತನ್ನ ಮುಕ್ತಿಯೂ ಜಗದ ಹಿತವೂ

'**ವಿವೇಕಪ್ರಭ**'ವೂ ಒಳಗೊಂಡಂತೆ ಬೇರೆ ಬೇರೆ ಪತ್ರಿಕೆಗಳಲ್ಲಿ ಬಂದ ಲೇಖನಗಳ ಸಂಕಲನ ಇದು. ಶ್ರೀರಾಮಕೃಷ್ಣ, ಸ್ವಾಮಿ ವಿವೇಕಾನಂದ, ಶ್ರೀಮಾತೆಯವರ ಬಗೆಗೆ ಬರೆದ ಲೇಖನಗಳಾದುದರಿಂದ, ಆ ಕಾಲದ ವಿಚಾರಗಳ ಪುನರವಲೋಕನ, ವಿಶ್ಲೇಷಣೆಗಳು ಪರಸ್ಪರ ಸಂಬಂಧ, ಸಮನ್ವಯಗಳೊಡನೆ ಒಂದು ಪರಿಧಿಯಲ್ಲಿ ಬಂದಂತಾಗಿದೆ. ಇಲ್ಲಿ ಸ್ವಾಮಿಜಿಯ ಬಗೆಗೆ ನಾಲ್ಕು, ಶ್ರೀರಾಮಕೃಷ್ಣರ ಬಗೆಗೆ ಆರು, ಶ್ರೀಮಾತೆಯವರ ಬಗೆಗೆ ಎರಡು ಲೇಖನಗಳು, ಕನ್ನಡದಲ್ಲಿ ರಾಮಕೃಷ್ಣ-ವಿವೇಕಾನಂದ ಸಂಚಲನ, ಕುವೆಂಪು ಸಾಹಿತ್ಯದ ಬಗ್ಗೆ ಎರಡು ಲೇಖನಗಳು ಇವೆ. ಇಂಗ್ಲಿಷಿನ '**ಶ್ರೀರಾಮಕೃಷ್ಣ ವಚನವೇದ**'ಕ್ಕೆ ಆಲ್ಡಸ್ ಹಕ್ಸ್ಲೆ ಬರೆದ ಮುನ್ನುಡಿಯ ಅನುವಾದವೂ ಇಲ್ಲಿದೆ.

ಸ್ವಾಮಿ ವಿವೇಕಾನಂದರನ್ನು ತಿಳಿಯುವ ಅನೇಕ ರೀತಿಗಳು, ಬ್ರಾಂಡ್‌ಗಳು ಇವೆ. ಐವರು ಕುರುಡರು ಆನೆಯನ್ನು ಕಂಡ ಕತೆಯಂತೆ ಇವರೆಲ್ಲರೂ ತಾವು ತಿಳಿದಂತಹ ವಿವೇಕಾನಂದರೇ ಸತ್ಯವೆಂದು ಅವರನ್ನು ಸೀಮಿತಗೊಳಿಸುವರು. ಸಂದರ್ಭಗಳಿಂದ ಬೇರ್ಪಡಿಸಿದ ಅವರ ಹೇಳಿಕೆಗಳನ್ನು ಉಪಯೋಗಿಸಿ ತಮ್ಮ ವಿಚಾರಗಳ ಸಮರ್ಥನೆಗೆ ವಿವೇಕಾನಂದರನ್ನು ಬಳಸಿಕೊಳ್ಳುವವರ ನಡುವೆ ನಿಜವಾದ ವಿವೇಕಾನಂದರನ್ನು ಹುಡುಕಿ ತರುವ ಪ್ರಯತ್ನವನ್ನು ಲೇಖಕರು ಮಾಡಿದ್ದಾರೆ. ಪರಕೀಯರ ದಾಸ್ಯ ಹಾಗೂ ಗತಕಾಲೀನತೆಯಿಂದ ಬಿಡುಗಡೆಗೊಳ್ಳುವ ಸಂದರ್ಭದಲ್ಲಿ ಸಂಕುಚಿತತೆಯನ್ನು ಬದಿಗಿಟ್ಟು, ಮಾನವತೆಗೆ ತೆರೆದುಕೊಳ್ಳುವ ಮನೋಧರ್ಮವನ್ನು ಭಾರತಕ್ಕೆ ಶ್ರೀರಾಮಕೃಷ್ಣ-ವಿವೇಕಾನಂದರು ಹೇಗೆ ಒದಗಿಸಿದರು ಎಂಬುದನ್ನು ವಿವರಿಸಿದ್ದಾರೆ. ಸ್ವಾಮೀಜಿಯ ಪ್ರಕಾರ ಅರಿವನ್ನು ಇರವಿನ ಹೊರಗೆ ಇರಿಸಿದುದೇ ತಪ್ಪು. ಇದರಿಂದಲೇ ಯಂತ್ರಗಳು, ವಿಜ್ಞಾನ ಅಮಾನವೀಯವಾಗಿವೆ. ನೋವು ನಲಿವುಗಳು ಸಮಗ್ರ ಇರವಿನ ಮೀಮಾಂಸೆಯ ಭಾಗವಾಗಿದ್ದು, ಜೀವನಕ್ಕೆ ಬೇಕಾಗಿರುವುದು ಸಹಿಷ್ಣುತೆಯಲ್ಲ, ಕ್ರಿಯಾತ್ಮಕ ಸ್ವೀಕಾರ. ಸ್ವಾಮೀಜಿ ಅಧ್ಯಾತ್ಮ ಮಾನವತಾವಾದಿಯಾಗಿದ್ದು, ವಿಶ್ವಮಾನವನನ್ನು ಗುರಿಯಾಗಿರಿಸಿದ್ದರು. ಧರ್ಮ ಹೊರಗಿರದೆ, ಮಾನವನಲ್ಲಿನ ಸುಪ್ತ ದೈವಿಕತೆಯ ಅಭಿವ್ಯಕ್ತಿ ಎಂದು ತಿಳಿಸಿದರು. ವ್ಯಕ್ತಿಗತ ಮುಕ್ತಿಯೇ ಗುರಿಯಾಗಿದ್ದ ವೇದಾಂತದ ಗುರಿಯನ್ನು ಸ್ವಾಮೀಜಿ 'ಸ್ವತಃ ದೇವರಾಗಿ, ಇತರರು ದೇವರಾಗಲು ನೆರವಾಗಿ' ಎಂದು ಬದಲಿಸಿದರು. ಇಹ-ಪರ ಭೇದವನ್ನು ಅಳಿಸಿ, ಜಗತ್ತು ಹಾಗೂ ಮನುಷ್ಯ ದೇವರ ವ್ಯಕ್ತ ವಿರಾಟ್ ರೂಪ, ಇದಕ್ಕೇ ಪೂಜೆ ಸಲ್ಲಬೇಕು ಎಂದರು. ವ್ಯವಸ್ಥೆಯೊಳಗೆ ಸಿಕ್ಕಿಬಿದ್ದು ಕಳೆದು ಹೋದ ಮಾನವನಿಗೆ ಹೊಸ ಗುರುತನ್ನು ತಂದುಕೊಟ್ಟರು. ಸ್ವಾಮಿ ವಿವೇಕಾನಂದರ ಕವನಗಳೆಲ್ಲವನ್ನೂ ಕನ್ನಡಿಸಿರುವ ಲೇಖಕರು ಸ್ವಾಮೀಜಿಯವರ ಕಾವ್ಯಪ್ರತಿಭೆಯ ಬಗ್ಗೆ ಬರೆದ ಲೇಖನ ಸೊಗಸಾಗಿದೆ. ಕಲೆ ಆಸ್ವಾದಿಸುವ ಸಾಮರ್ಥ್ಯ ಇಲ್ಲದವನು ಧಾರ್ಮಿಕನಾಗಲಾರ ಎನ್ನುವ ಸ್ವಾಮೀಜಿಯವರಲ್ಲಿ ಕಾಣುವಿಕೆ (ದರ್ಶನ) ಹಾಗೂ ಕಟ್ಟುವಿಕೆ (ಭಾಷಾಕೌಶಲ) ಇರುವುದನ್ನು ಸರಿಯಾಗಿ ಗುರುತಿಸಿದ್ದಾರೆ.

ವ್ಯವಸ್ಥೆಯ ಆರಾಧನೆಯಿಂದ ಆಂತರ್ಯದ ಆಧ್ಯಾತ್ಮಿಕತೆಯ ವೈಯಕ್ತಿಕ ಶೋಧಕ್ಕೆ ಕರೆದೊಯ್ಯುವ ಶ್ರೀರಾಮಕೃಷ್ಣರ 'ಎನಿತು ಮತಗಳೋ ಅಷ್ಟು ಪಥಗಳು' ಎಂಬ ಮಾತು ತನ್ನನ್ನು ವಿಸ್ತರಿಸಿಕೊಳ್ಳುವ ಹಂಬಲದ್ದು ಎಂದು ಗುರುತಿಸುವ




*ಕೃತಿ* : **ತನ್ನ ಮುಕ್ತಿಯೂ ಜಗದ ಹಿತವೂ**
*ಲೇಖಕರು* : **ಡಾ. ಎಚ್.ಎಸ್.ಮುರಳೀಧರ**
*ಪ್ರಕಾಶಕರು* : **ಎಂ.ಸಿ. ನರೇಂದ್ರ ,**
**ಮೆ। ಎಂ. ಮುನಿಸ್ವಾಮಿ ಅಂಡ್ ಸನ್ಸ್, ಸರ್ವೋದಯ, ನಂ. 72, ಪ್ರೊ . ಎ.ಆರ್. ಕೃಷ್ಣಶಾಸ್ತ್ರಿ ರಸ್ತೆ , (ಸರ್ವೆಯರ್ ಸ್ಟ್ರೀಟ್), ಬಸವನಗುಡಿ, ಬೆಂಗಳೂರು - 560 004**
*ಪುಟಗಳು:* **108** *ಬೆಲೆ* : **75/**

ಲೇಖಕರು ಧರ್ಮಸಮನ್ವಯವೇ ಅವರ ಪರಿಧಿ ಎಂದು ಗುರುತಿಸುತ್ತಾರೆ. ಶ್ರೀ ಸಾಮಾನ್ಯನಾಗಿ ನಮಸ್ಕಾರಾಸ್ತ್ರದೊಡನೆ ಅಂದಿನ ಆಧುನಿಕ ಮುಂದಾಳುಗಳನ್ನು ಕಂಡು ಅವರು ತಮ್ಮ ವಿಚಾರಗಳನ್ನು ಒಪ್ಪುವಂತೆ ಅವರುಗಳನ್ನು ತಿದ್ದುತ್ತಾರೆ. ಇದನ್ನು ಲೇಖಕರು ಮಾನವೀಯವಾಗುವುದೆಂದರೆ ಸಾಮಾನ್ಯತಾ ಸ್ವರೂಪವನ್ನು ಧರಿಸಿರುವುದು ಎಂದು ಬಣ್ಣಿಸುತ್ತಾರೆ. ವ್ಯಕ್ತ-ಅವ್ಯಕ್ತಗಳ ನಡುವಿನ ಸೇತುವೆ ಗುರುತತ್ತ್ವ; ಪ್ರತಿಯೊಬ್ಬನಿಗೂ ಅವನದೇ ಆದ ಭಾಷೆಯಲ್ಲಿ ಧರ್ಮವನ್ನು ಬೋಧಿಸಬೇಕು ಎಂದು ಶ್ರೀರಾಮಕೃಷ್ಣರು ಗುರುತಿಸಿ, ವೈವಿಧ್ಯಮಯ ಸಾಧನಾ

ವಿಧಾನಗಳನ್ನು ತಾವೂ ಅನುಸರಿಸಿ ಇತರರೂ ಅನುಸರಿಸುವಂತೆ ಮಾಡಿದರು. ಅವರಲ್ಲಿ ಸತ್ಯವ್ರತವೆನ್ನುವುದು ವಾಚಿಕವಾಗಿರದೆ ಅಸ್ತಿತ್ವ ಸಮಸ್ತವನ್ನೂ ಒಳಗೊಂಡಿತ್ತು ಎನ್ನುವ ಲೇಖಕರು ಅನೇಕ ಸಂದರ್ಭಗಳನ್ನು ಉದಾಹರಿಸುತ್ತಾರೆ. ಹರಿದಾಸ ಸಾಹಿತ್ಯದ ವಿಶೇಷ ಅಧ್ಯಯನ ಮಾಡಿರುವ ಅವರು ಶ್ರೀರಾಮಕೃಷ್ಣರ ಹಾಗೂ ಕನ್ನಡದ ಹರಿದಾಸರ ದಾಸ್ಯಭಾವಕ್ಕೆ ಒತ್ತು ನೀಡುವ, ಭಗವನ್ನಾಮಕ್ಕೆ ಮಹತ್ವ ನೀಡುವ ಮನೋಧರ್ಮ ಹಾಗೂ ಅಭಿವ್ಯಕ್ತಿಯ ರೀತಿ ಒಂದೇ ಎಂದು ಗುರುತಿಸುತ್ತಾರೆ. ಶ್ರೀರಾಮಕೃಷ್ಣರ ದೈನಂದಿನ ಜೀವನ, ಸಂಭಾಷಣೆಗಳನ್ನು ಯಥಾವತ್ತಾಗಿ ದಾಖಲಿಸಿದ 'ಮ' ಅವರ ಮಹತ್ವವನ್ನು ಬಿಂಬಿಸುವ ಆಲ್ಡಸ್ ಹಕ್ಸ್ಲೇ ಅವರ ಲೇಖನದ ಅನುವಾದ ಸೊಗಸಾಗಿದೆ.

ಶ್ರೀಮಾತೆ ಶಾರದಾದೇವಿಯವರ ಎಲ್ಲವನ್ನೂ ತನ್ನದೆನ್ನುವ ಅಸ್ತಿತ್ವ ಸಹಜತೆಯನ್ನು ಅರಳಿಸಬಲ್ಲುದು. ಪರಕೀಯತೆ ಇಲ್ಲದಿರುವ ಆದರ್ಶ ಅವರದು. ಅವರ ದರ್ಶನದ ಹಿಂದೆ ಹೆಣ್ಣಿನ ಕಣ್ಣು ಇದೆ. ಸ್ಥಳೀಯತೆ ಹಾಗೂ ವಿಶ್ವಾತ್ಮಕತೆಯ ನಡುವಿನ ಸಂಬಂಧದಂತೆ ಅವರಿದ್ದರು. ಶ್ರೀರಾಮಕೃಷ್ಣರ ವಿವಿಧ ಧರ್ಮಗಳ ಸಾಧನೆಯನ್ನು ಮಾಡಿರುವುದರ ಹಿಂದೆ ತನ್ನ ಸಂತಾನದ ಬಹುಮುಖತೆಯನ್ನು ಮಾನ್ಯ ಮಾಡುವ ಮಾತೃತ್ವದ ದೃಷ್ಟಿ ಇದೆ ಎಂದು ಲೇಖಕರು ಹೇಳುತ್ತಾರೆ. ಶ್ರೀಮಾತೆ ಲೋಕದ ರಚನೆಯಲ್ಲಿ ದೇವರನ್ನು ಸ್ಪರ್ಶಿಸಿದವರು; ಪರಮಹಂಸರು ದೇವರ ರಚನೆಯಲ್ಲಿ ಲೋಕವನ್ನು ಸ್ಪರ್ಶಿಸಿದವರು. ಈ ಎರಡು ಸ್ಪರ್ಶಗಳ ಸಂಗಮ ಬಿಂದು ಎಲ್ಲ ಸಿದ್ಧಿಯೂ ತನ್ನ ಶಿಖರದಲ್ಲಿ ಸ್ವರೂಪತಃ ಸ್ತ್ರೀತತ್ತ್ವವೆಂಬ ಸಂದೇಶವನ್ನು ನೀಡುವಂತೆ ಪರಮಹಂಸರು ಶ್ರೀಮಾತೆಯವರನ್ನು ಪೂಜಿಸಿದ ಸಂದರ್ಭ ಎಂದು ಲೇಖಕರು ಕವಿಯಾಗಿ ವರ್ಣಿಸಿದ್ದಾರೆ.

ಶ್ರೀರಾಮಕೃಷ್ಣ ವಿವೇಕಾನಂದ ಸಾಹಿತ್ಯವನ್ನು ತಲಸ್ಪರ್ಶಿಯಾಗಿ ಅಧ್ಯಯನ ಮಾಡಿರುವ ಶ್ರೀ ಮುರಳೀಧರ ಅವರು ತಮ್ಮ ಸಮೀಕ್ಷಾ ಲೇಖನದಲ್ಲಿ ಚಾರಿತ್ರಿಕವಾಗಿ ಮೊದಲ ಲೇಖಕರನ್ನು ನೆನೆದಿದ್ದಾರೆ. ತಾತಯ್ಯ ಶ್ರೀ ವೆಂಕಟಕೃಷ್ಣಯ್ಯನವರು ಸಂಪಾದಕರಾಗಿ ೧೮೯೮ರಲ್ಲಿ **'ವಿವೇಕಾನಂದ'** ಎಂಬ ಪತ್ರಿಕೆಯನ್ನು ಹೊರತಂದು ನಡೆಸಿದುದು, ೧೯೦೯ರಲ್ಲಿ ಡಿ.ವಿ.ಜಿ. ವಿವೇಕಾನಂದರ ಆದರ್ಶ, ಅಭೇದಾನಂದರ ದೀಕ್ಷೆ ಬಗ್ಗೆ ಸ್ವಾಗತ ಗೀತೆ ಬರೆದುದು, ೧೯೧೯ರಲ್ಲಿ ನಂಗಪುರಂ ವೆಂಕಟೇಶ ಅಯ್ಯಂಗಾರ್ಯರ **'ಶ್ರೀರಾಮಕೃಷ್ಣ ಪರಮಹಂಸರ ಉಪದೇಶ ವಾಕ್ಯಾವಳಿ'** ಹಾಗೂ ಎ.ಆರ್.ಕೃಷ್ಣಶಾಸ್ತ್ರೀ ಮತ್ತು ಟಿ.ಎಸ್. ವೆಂಕಣ್ಣಯ್ಯನವರ **'ಶ್ರೀರಾಮಕೃಷ್ಣ ಪರಮಹಂಸರ ಚರಿತ್ರೆ'** ಪುಸ್ತಕಗಳು ಪ್ರಕಟವಾದುದು – ಈ ಮೊದಲುಗಳನ್ನು ಕುರಿತು ಮೌಲ್ಯಮಾಪನ ಮಾಡಿದ್ದಾರೆ. ಕುವೆಂಪು ಅವರ ದಾರ್ಶನಿಕತೆಯು ಶ್ರೀರಾಮಕೃಷ್ಣ ವಿವೇಕಾನಂದರ ಉಪದೇಶಗಳಿಂದ ಪ್ರೇರಣೆ ಪಡೆದುದನ್ನೂ, ಅವರು ಬರೆದ ಶ್ರೀರಾಮಕೃಷ್ಣ – ವಿವೇಕಾನಂದರ ಜೀವನ ಚರಿತ್ರೆಗಳನ್ನೂ, ಖಂಡಕಾವ್ಯವನ್ನೂ ಪರಿಚಯಿಸಿ **'ಶ್ರೀ ರಾಮಾಯಣ ದರ್ಶನಂ'** ಮಹಾಕಾವ್ಯ ಹಾಗೂ ಕವಿತೆಗಳಲ್ಲಿ ಶ್ರೀರಾಮಕೃಷ್ಣರೇ ಗುರಿಯಾಗಿರುವುದನ್ನು ತೋರಿಸಿದ್ದಾರೆ. ಸ್ವತಃ ಕುವೆಂಪು ತಮ್ಮನ್ನು ಶ್ರೀರಾಮಕೃಷ್ಣ ಗೋತ್ರೋದ್ಭವನೆಂದು ಕರೆದುಕೊಂಡಿರುವುದನ್ನು, ಅವರ ಕಾವ್ಯದೃಷ್ಟಿಯ ಮೂಲ ಸೆಲೆ ಶ್ರೀರಾಮಕೃಷ್ಣರಾಗಿರುವುದನ್ನು ಗುರುತಿಸಿದ್ದಾರೆ. ಒಟ್ಟಿನಲ್ಲಿ ಈ ಪುಸ್ತಕ ಶ್ರೀರಾಮಕೃಷ್ಣ ವಿವೇಕಾನಂದ ಸಾಹಿತ್ಯಕ್ಕೆ ಒಳ್ಳೆಯ ಸೇರ್ಪಡೆ.

*— ಡಾ. ಹೆಚ್. ಪಾಂಡುರಂಗ ವಿಠಲ*

## ಸತ್ಯ ಮೊದಲಿಗೆ ಕಹಿ; ಕೊನೆಯಲ್ಲಿ ಸಿಹಿ

''ಇದನ್ನು ಕುಡಿ'' ಎಂದ ಗುರು. ಅಪೂರ್ವ ಗಿಡಮೂಲಿಕೆಗಳಿಂದ ತಯಾರಿಸಿದ ಕಷಾಯವನ್ನು ಅವನು ಶಿಷ್ಯನಿಗೆ ಕೊಟ್ಟ. ಶಿಷ್ಯ ಅದನ್ನು ಕುಡಿದು, ''ತುಂಬಾ ಕಹಿ. ಒಂದು ಗುಟುಕೂ ಕುಡಿಯಲಾಗುತ್ತಿಲ್ಲ'' ಎಂದ. ಇನ್ನೊಬ್ಬ ಶಿಷ್ಯನೂ ಪ್ರಯತ್ನಿಸಿದ. ''ಇದಕ್ಕಿಂತ ಕಹಿ ಇನ್ನಾವುದೂ ಇರಲಾರದು'' ಎಂದನಾತ. ಮೂರನೇ ಶಿಷ್ಯ ಕುಡಿದ ನಂತರ ಹೇಳಿದ, ''ಅದ್ಭುತವಾಗಿದೆ.. ಏನೇ ಆಗಲಿ, ಗುರುಗಳು ಕೊಟ್ಟ ಪ್ರಸಾದ ತಾನೆ! ಇದನ್ನು ಕುಡಿದರೆ ಒಳ್ಳೆಯದೇ ಆದೀತು.''

''ಹೌದು ಮಗೂ, ಅದರಲ್ಲಿ ತುಂಬಾ ಅಪರೂಪದ ಔಷಧೀಯ ಗುಣವಿದೆ. ಆದರೆ ಅದಕ್ಕಿಂತ ಹೆಚ್ಚಿನದಾಗಿ, ಇನ್ನೊಂದು ಅಂಶವಿದೆ. ಇದನ್ನು ಕುಡಿಯಲು ಕೊಟ್ಟದ್ದೇಕೆಂದರೆ, ನಿನ್ನ ತಾಳ್ಮೆ, ವಿನಯಗಳನ್ನು ಪರೀಕ್ಷೆ ಮಾಡಲು. ಅಷ್ಟೇ ಅಲ್ಲ, ಬೇರೊಂದು ಅರ್ಥವೂ ಇದರಲ್ಲಿದೆ. ಸತ್ಯ ಹಾಗೂ ಜ್ಞಾನ ಮೊದಲು ಕಹಿಯಾಗಿರುತ್ತದೆ, ಕೊನೆಗೆ ಸಿಹಿಯಾಗಿರುತ್ತದೆ ಎಂಬುದನ್ನು ನಿಮಗೆ ತಿಳಿಸಿಕೊಡಬೇಕಿತ್ತು.''

ಶಿಷ್ಯಂದಿರು ತುಂಬ ಗಮನಕೊಟ್ಟು ಅವರ ಮಾತನ್ನು ಕೇಳಿಸಿಕೊಂಡರು. ಗುರುಗಳ ಆಶ್ರಮದಲ್ಲಿ ಅದು ಅವರ ಮೊದಲನೆಯ ದಿವಸ. ಸತ್ಯವನ್ನು ಕುರಿತು ಮೊದಲ ಪಾಠವನ್ನು ಅವರು ಶಿಷ್ಯಂದಿರಿಗೆ ಕಲಿಸಿದ್ದರು.

*('In Communion with Consciousness' ಗ್ರಂಥದಿಂದ)*

# ಶ್ರೀ ಮಧ್ವಾಚಾರ್ಯರು

ಆಂಗ್ಲಮೂಲ: **ಸ್ವಾಮಿ ತಪಸ್ಯಾನಂದ** ಕನ್ನಡಕ್ಕೆ: **ಸ್ವಾಮಿ ವೀರೇಶಾನಂದ**

ಭಾಗ ೩



ಇದಲ್ಲದೆ ಸ್ವತಃ ಮಧ್ವಾಚಾರ್ಯರೇ 'ಅನುವ್ಯಾಖ್ಯಾನ' ಎಂಬ ಬ್ರಹ್ಮಸೂತ್ರಗಳ ಮೇಲಿನ ಇನ್ನೊಂದು ಭಾಷ್ಯವನ್ನು ರಚಿಸಲು ಆರಂಭಿಸಿದರು. ಅದನ್ನು ಅವರು ತಮ್ಮ ನಾಲ್ಕು ಮಂದಿ ಶಿಷ್ಯರ ಬಳಿ ಹೇಳಿ ಬರೆಸಿದರು. ಇದು ಬೃಹದ್ ಪ್ರಮಾಣದ ಗ್ರಂಥ ವಾಗಿದೆ. ಅವರು ಈಗಾಗಲೇ ಬದರೀಧಾಮದಲ್ಲಿ ರಚಿಸಿದ ಸಂಕ್ಷಿಪ್ತ ಭಾಷ್ಯಕ್ಕೆ ಬರೆದ ವಿಸ್ತಾರವಾದ ವ್ಯಾಖ್ಯಾನವಿದು. ಇಲ್ಲಿ ಅವರು ಶಂಕರ ಮತ್ತು ರಾಮಾನುಜ ಮುಂತಾದ ಭಾಷ್ಯಕಾರರ ಅಭಿಪ್ರಾಯಗಳ ತಾತ್ತ್ವಿಕವಾದ ಖಂಡನೆಯನ್ನು ಮಾಡಿದ್ದಾರೆ. ಇದಲ್ಲದೆ ಇಷ್ಟಸಿದ್ಧಿ, ವಿವರಣ, ಭಾಮತೀ ಮುಂತಾದ ಅದ್ವೈತ ಗ್ರಂಥಗಳಲ್ಲಿ ಬರುವ ಅನೇಕ ವಿಷಯಗಳನ್ನು ತೆಗೆದುಕೊಂಡು ಅವುಗಳನ್ನು ನಿರಾಕರಿಸುತ್ತಾರೆ. ಅನಂತರ ಅವರು ತಮ್ಮ ಹುಟ್ಟೂರಾದ ಪಾಜಕ ಕ್ಷೇತ್ರಕ್ಕೆ ಹಿಂದಿರುಗಿದರು.

ಹೀಗೆ ಮಧ್ವಾಚಾರ್ಯರು ಅನೇಕ ಪ್ರದೇಶಗಳಲ್ಲಿ ಪ್ರಸಿದ್ಧರಾದರು. ಅವರಿಗೆ ಅನೇಕ ಗೃಹಸ್ಥ ಮತ್ತು ಸಂನ್ಯಾಸಿ ಭಕ್ತರಾದರು. ಅವರಲ್ಲಿ ಗಮನಾರ್ಹವಾದ ವ್ಯಕ್ತಿಯೆಂದರೆ ಮಧ್ವರ ತಮ್ಮಂದಿರೇ. ಅವರು ಸಂನ್ಯಾಸಿಯಾಗಲು ಬಯಸಿದರು. ಅಷ್ಟರಲ್ಲಿ ಆಚಾರ್ಯರ ತಂದೆತಾಯಿಯರು ಸಾವನ್ನಪ್ಪಿದ್ದರು. ಮಧ್ವರು ಅವರಿಗೆ ಸಂನ್ಯಾಸವನ್ನು ನೀಡಿ, ವಿಷ್ಣುತೀರ್ಥ ಎಂಬ ಹೆಸರನ್ನು ಕೊಟ್ಟರು. ಇವರು ಮುಂದೆ ಮಧ್ವರ ಪ್ರಮುಖ ಶಿಷ್ಯರಾಗಿ ಪ್ರಖ್ಯಾತರಾದರು. ಅಲ್ಲದೆ ವಿಷ್ಣುತೀರ್ಥರು ಬಹು ದೊಡ್ಡ ತಪಸ್ವಿ ಎಂದೂ ಹೆಸರು ಪಡೆದಿದ್ದಾರೆ. ಕಠಿಣ ತಪಾಚರಣೆಗಳಲ್ಲಿ ಅವರು ಬಹಳ ಕಾಲ ತನ್ಮಯರಾಗಿದ್ದರು. ತದನಂತರ ತಮ್ಮ ಗುರುಗಳ ದ್ವೈತವೇದಾಂತ ತತ್ತ್ವದ ಪ್ರಸಾರ ಕಾರ್ಯವನ್ನು ಬಹು ನಿಷ್ಠೆಯಿಂದ ನಡೆಸಿದರು. ಈ ನೂತನ ಸಂಪ್ರದಾಯಕ್ಕೆ ಹಲವಾರು ಜನರನ್ನು ಪರಿವರ್ತಿಸಿದರು. ಇದಲ್ಲದೆ ಆಚಾರ್ಯರಿಗೆ ತ್ರಿವಿಕ್ರಮಾಚಾರ್ಯರಂಥ ಗೃಹಸ್ಥ ಶಿಷ್ಯರೂ ಇದ್ದರು. ಅವರ ಶಿಷ್ಯರಲ್ಲಿ ಹಲವರು ಪಂಡಿತರು. ಆದರೆ ಬಹುತೇಕರು ಪಂಡಿತರಲ್ಲದಿದ್ದರೂ ವಿಷ್ಣುವಿನ ಏಕಾಂತ ಭಕ್ತರಾಗಿದ್ದರು ಮತ್ತು ದ್ವೈತ ವೇದಾಂತದ ಅನುಯಾಯಿಗಳಾಗಿದ್ದರು.

### ಪವಾಡಗಳ ಸರಣಿ

ಇದೇ ಸಮಯದಲ್ಲಿ ಆಚಾರ್ಯರು ಅನೇಕ ಪವಾಡಗಳನ್ನು ಮಾಡಿದರು. ಇವು ಅಕ್ಕಪಕ್ಕದ ಪರಿಸರದ ಜನರನ್ನು ಆಶ್ಚರ್ಯ ಚಕಿತರನ್ನಾಗಿ ಮಾಡಿದವು. ಗೋಮತೀ ನದಿಯ ತಟದಲ್ಲಿನ ಕೆಲವು ಪ್ರದೇಶಗಳ ರಾಜನೊಬ್ಬನು ವೇದವಿರೋಧಿಯಾಗಿದ್ದನು. ''ನೀವು ವೈದಿಕ ಮಂತ್ರಗಳ ಶಕ್ತಿಯನ್ನು ಪ್ರದರ್ಶಿಸಿ ತೋರಿಸಿ'' ಎಂದು ಅವನು ಆಚಾರ್ಯರಿಗೆ ಸವಾಲು ಹಾಕಿದನು. ಆಚಾರ್ಯರು 'ಯಾ ಓಷಧೀಃ ಪೂರ್ವಜಾತಾ' ಎಂದು ಆರಂಭವಾಗುವ ಮಂತ್ರವನ್ನು ಪಠಿಸಿ, ಕೆಲವು ಬೀಜಗಳನ್ನು ನೆಲದಲ್ಲಿ ಬಿತ್ತಿದರು. ಅವು ಒಡನೆ ಮೊಳಕೆಯೊಡೆದು, ಹೂವುಗಳು ಬಿರಿದು, ಹಣ್ಣುಗಳೂ ಆದವು. ಒಂದು ದಿನ ಎಲ್ಲ ದೀಪಗಳೂ ಒಮ್ಮೆಗೇ ನಂದಿಹೋದವು. ಆಚಾರ್ಯರು ತಮ್ಮ ಕಾಲಿನ ದೊಡ್ಡ ಬೆರಳ ನಖದ ಜ್ಯೋತಿಯಿಂದಲೇ ಎಲ್ಲರೂ ಅಧ್ಯಯನ ಮಾಡುವಂತೆ ಮಾಡಿದರು. ಇನ್ನೊಂದು ಬಾರಿ ದೊಡ್ಡದೊಂದು ಬಂಡೆಯನ್ನು ಅವರು ಲೀಲಾಜಾಲವಾಗಿ ಎತ್ತಿ, ಸರಿಯಾದ ಜಾಗದಲ್ಲಿ ಇಟ್ಟರು. ಹಲವಾರು ಜನ ಎತ್ತಲೂ ಸಾಧ್ಯವಾಗದಿದ್ದ ಬಂಡೆ ಅದು! ಇದು ಆಚಾರ್ಯರು ಹನುಮಂತನ ಅವತಾರದಲ್ಲಿ ಗಂಧಮಾದನ ಪರ್ವತವನ್ನೇ ಎತ್ತಿಕೊಂಡು ಬಂದಿದ್ದನ್ನು ನೆನಪಿಗೆ ತರುತ್ತದೆ. ಆ ಬಂಡೆಯನ್ನು 'ಭೀಮನ ಕಲ್ಲು' ಎಂದು ಕರೆಯುತ್ತಾರೆ. ಒಮ್ಮೆ ಸೂರ್ಯಗ್ರಹಣದ ಸಮಯದಲ್ಲಿ ಅವರು ತಮ್ಮ ಶಿಷ್ಯರನ್ನು

ಕರೆದುಕೊಂಡು, ಸಮುದ್ರದ ತಟಕ್ಕೆ ಹೋದರು. ಅಲ್ಲಿ ಪ್ರಕ್ಷುಬ್ಧವಾದ ಸಮುದ್ರದ ಅಲೆಗಳ ಮೊರೆತವನ್ನೂ ಮೀರಿಸುವ ಗಂಭೀರ ಧ್ವನಿಯಲ್ಲಿ ಬಹಳ ಕಾಲದವರೆಗೂ ಐತರೇಯ ಸೂಕ್ತಗಳನ್ನು ವಿವರಿಸುತ್ತ ಪ್ರವಚನ ಮಾಡಿದರು. ಸಮುದ್ರ ಸ್ನಾನದ ಸಮಯ ಬಂದಾಗ ಪ್ರಕ್ಷುಬ್ಧವಾಗಿದ್ದ ಸಮುದ್ರವನ್ನು ತಮ್ಮ ಕಡೆಗಣ್ಣಿನಿಂದ ಒಮ್ಮೆ ದಿಟ್ಟಿಸಿ ನೋಡಿದರು, ಅಷ್ಟೇ. ಸಮುದ್ರವು ಶಾಂತವಾಯಿತು. ಅಲ್ಲಿ ನೆರೆದಿದ್ದ ಜನರೆಲ್ಲರೂ ಒಂದು ಶಾಂತವಾದ ಕೊಳದಲ್ಲಿ ಸ್ನಾನ ಮಾಡಿದಂತೆ, ಸಮುದ್ರದಲ್ಲಿ ಸ್ನಾನ ಮಾಡಿದರು.

ಆಚಾರ್ಯರ ಅಣಿಮಾ, ಲಘಿಮಾ ಮುಂತಾದ ಸಿದ್ಧಿಗಳನ್ನು ತೋರುವ ಹಲವಾರು ಇನ್ನಿತರೆ ಘಟನೆಗಳು 'ಮಧ್ವವಿಜಯ'ದಲ್ಲಿ ವರ್ಣಿತವಾಗಿವೆ. ಗಂಧವಾತ ಎಂಬ ಕುಸ್ತಿಗಾರ ಮತ್ತು ಅವನ ಸಹೋದರ ಅವರ ಕತ್ತನ್ನು ಹಿಡಿದು ಹಿಸುಕಿದರಂತೆ. ಆದರೆ ಅವರ ಗಂಟಲನ್ನು ಅಲುಗಾಡಿಸಲು ಅವರ ಕೈಯಲ್ಲಿ ಸ್ವಲ್ಪವೂ ಸಾಧ್ಯವಾಗಲಿಲ್ಲ. ಪ್ರಯತ್ನಿಸಿ ಸೋತು ಶ್ರಮಗೊಂಡ ಅವರು ಅಲ್ಲಿಯೇ ಕೆಳಕ್ಕೆ ಬಿದ್ದರಂತೆ. ಅಲ್ಲದೆ ಅವರಿಗೆ ಆಚಾರ್ಯರ ಕಿರುಬೆರಳನ್ನು ಕೂಡ ಅಲುಗಾಡಿಸಲಾಗಲಿಲ್ಲ. ಒಮ್ಮೆ ಅವರು ಒಬ್ಬ ಭಕ್ತನ ಹೆಗಲುಗಳ ಮೇಲೆ ಕುಳಿತುಕೊಂಡು ನರಸಿಂಹ ದೇವಸ್ಥಾನಕ್ಕೆ ಹೋದರು. ಆದರೆ ಇನ್ನೊಮ್ಮೆ ನಾಲ್ಕು ಜನ ದೃಢಕಾಯದ ಪೈಲ್ವಾನರು – ಶಿವಾಗ್ನಿ, ಉಗ್ರ, ಅಮೋಘ, ವಾಸುದೇವ ಅವರ ಶಕ್ತಿಯನ್ನು ಪರೀಕ್ಷಿಸಲು ಬಂದಾಗ, ಅವರನ್ನು ಒಂದಿಂಚೂ ಅಲುಗಾಡಿಸಲು ಸಾಧ್ಯವಾಗಲಿಲ್ಲ. ಪಾರಂತಿ ಎಂಬ ಗ್ರಾಮದಲ್ಲಿ ಮಳೆಯ ಅಭಾವದಿಂದ ಕೆರೆಯ ನೀರು ಬತ್ತಿಹೋಗಿತ್ತು. ಆಚಾರ್ಯರು ತಮ್ಮ ಶಕ್ತಿಯಿಂದ ಮೋಡಗಳನ್ನು ಸೃಷ್ಟಿಸಿ ಮಳೆಯನ್ನು ಕರೆಯಿಸಿ, ಕೆರೆ ತುಂಬುವಂತೆ ಮಾಡಿದರು. ಅಲ್ಪ ಆಹಾರದಿಂದ, ತಮ್ಮ ಪವಾಡ ಶಕ್ತಿಯಿಂದ, ನೂರಾರು ಜನಗಳ ಹೊಟ್ಟೆ ತುಂಬುವಂತೆ ಮಾಡುವ ಶಕ್ತಿ ಅವರಲ್ಲಿತ್ತು. ಅಲ್ಲದೆ, ಒಮ್ಮೆ ಕುಳಿತರೆ ಮೂವತ್ತು ಜನರು ತಿನ್ನುವಷ್ಟು ಆಹಾರವನ್ನು ತಾವೊಬ್ಬರೇ ಸೇವಿಸುವ ಶಕ್ತಿಯೂ ಅವರಲ್ಲಿತ್ತು.

ಈ ಎಲ್ಲ ಅತೀಂದ್ರಿಯ ಘಟನೆಗಳು ಮಧ್ವವಿಜಯದಲ್ಲಿ ಉಲ್ಲೇಖಿತವಾಗಿವೆ. ಇದರ ಉದ್ದೇಶ, ಆಚಾರ್ಯರು ಆಧ್ಯಾತ್ಮಿಕವಾಗಿ ಮತ್ತು ಬೌದ್ಧಿಕವಾಗಿ ಮಾತ್ರವೇ ಅಸಾಧಾರಣ ಶಕ್ತಿಯುಳ್ಳವರಲ್ಲ, ಅದಕ್ಕೆ ಬದಲಾಗಿ ಅವರು ಅನೇಕ ವಿಶಿಷ್ಟ ಅಲೌಕಿಕ ಸಿದ್ಧಿಗಳನ್ನೂ ಕರಗತ ಮಾಡಿಕೊಂಡಿದ್ದರು; ಇದಲ್ಲದೆ ಅವರ ಶಾರೀರಿಕ ಶಕ್ತಿಯೂ ಅಸದಳವಾಗಿತ್ತು ಎಂದು ಅವರ ಹೆಗ್ಗಳಿಕೆಯನ್ನು ಎತ್ತಿತೋರಿಸುವುದೇ ಆಗಿದೆ. ಹೀಗೆ ಮಧ್ವಾಚಾರ್ಯರು ಮುಖ್ಯಪ್ರಾಣ ದೇವರ ಅಂಶ ಎಂಬುದನ್ನೂ, ಹಿಂದಿನ ಜನ್ಮಗಳಲ್ಲಿ ಅವರು ಆಂಜನೇಯನಾಗಿಯೂ, ಭೀಮಸೇನನಾಗಿಯೂ ಅವತಾರವೆತ್ತಿದ್ದಾರೆ ಎಂದು ತೋರಿಸಲೂ ಅಸಾಧಾರಣ ಶಕ್ತಿ ಪ್ರದರ್ಶನದ ಈ ಉಲ್ಲೇಖಗಳು ಸಹಾಯಕವಾಗಿವೆ. ಈ ಇಬ್ಬರು ಹಿಂದಿನ ಅವತಾರಗಳು ಕೂಡ ತಮ್ಮ ತಮ್ಮ ದೈಹಿಕ ಶಕ್ತಿಗೆ ಹೆಸರಾಗಿದ್ದವರು ಎಂಬುದನ್ನು ನೆನಪಿನಲ್ಲಿಡಬೇಕು.

### ಮಧ್ವರ ನಿರ್ಗಮನ

ಮಧ್ವ ಸಂಪ್ರದಾಯದಲ್ಲಿ ಬರುವ ಇನ್ನೊಂದು ಮಹತ್ವದ ಘಟನೆಯೆಂದರೆ ಎಂಟು ಮಠಗಳ ಸ್ಥಾಪನೆ. ಮಧ್ವರು ಎಂಟು ಸಂನ್ಯಾಸಿಗಳನ್ನು ಅವುಗಳ ಅಧಿಪತಿಗಳನ್ನಾಗಿ ನಿಯಮಿಸಿ, ಶ್ರೀಕೃಷ್ಣನ ನಿರಂತರ ಪೂಜೆಗೆ ಅವರನ್ನು ನಿಯೋಜಿಸಿದರು ಎಂಬ ಐತಿಹ್ಯವಿದೆ. ಆದರೆ ಇದರ ಬಗ್ಗೆ ಸ್ಪಷ್ಟವಾದ ಮಾಹಿತಿಯು 'ಮಧ್ವವಿಜಯ'ದಿಂದ ತಿಳಿದುಬರುವುದಿಲ್ಲ. ಕೃಷ್ಣದೇವರ ದೇವಸ್ಥಾನವನ್ನು ಸ್ಥಾಪಿಸಿದ ಆಚಾರ್ಯರು, ಶ್ರೀಕೃಷ್ಣ ಪೂಜೆಗೆ ಸರಿಯಾದ ವ್ಯವಸ್ಥೆಯನ್ನು ಮಾಡಿರುವುದು ಸ್ವಾಭಾವಿಕವೇ ಆಗಿದೆ. ಕೆಲವು ಭಾಷ್ಯಗಳು ಆ ಮಠಗಳ ಹೆಸರುಗಳನ್ನು ಮತ್ತು ಎಂಟು ಜನ ಸಂನ್ಯಾಸಿಗಳನ್ನು 'ಮಧ್ವವಿಜಯ'ವು ಉಲ್ಲೇಖಿಸುತ್ತದೆ ಎಂದು ಹೇಳುತ್ತವೆ. ಈ ಮಠಗಳು ಇಂದಿಗೂ ಈ ಕಾರ್ಯವನ್ನು ಅಚ್ಚುಕಟ್ಟಾಗಿ ಮಾಡಿಕೊಂಡುಹೋಗುತ್ತಿವೆ. ತಮ್ಮ ಸಂಪ್ರದಾಯಗಳ ಮುಖ್ಯಕೇಂದ್ರವನ್ನಾಗಿ ಉಡುಪಿಯನ್ನೇ ಮಾಡಿಕೊಂಡಿವೆ.

ಮಧ್ವರ ನಿರ್ಯಾಣದ ಬಗ್ಗೆ ನಮಗೆ ಖಚಿತ ಮಾಹಿತಿ ತಿಳಿದು ಬರುವುದಿಲ್ಲ. ನೂತನ ಭಕ್ತಿಸಿದ್ಧಾಂತ ಮತ್ತು ಮತವನ್ನು ಸ್ಥಾಪಿಸುವ ತಮ್ಮ ಜೀವನಕಾರ್ಯವನ್ನು ಸಂಪನ್ನಗೊಳಿಸಿದ ನಂತರ, ಮಧ್ವರ ಮೇಲೆ ಗಂಧರ್ವರು ಮತ್ತು ದೇವತೆಗಳು ಪುಷ್ಪವೃಷ್ಟಿಯನ್ನು ಹರಿಸಿದರು ಎನ್ನಲಾಗಿದೆ. ಆ ಪುಷ್ಪರಾಶಿಯ ಮಧ್ಯೆ ಕಾಣದಾದ ಆಚಾರ್ಯರು ಅಂತರ್ಧಾನರಾಗಿಬಿಟ್ಟರು ಎಂಬ ಐತಿಹ್ಯವಿದೆ. ಇನ್ನೊಂದು ನಂಬಿಕೆಯ ಪ್ರಕಾರ ಅವರು ಇನ್ನೂ ಮೇಲು ಬದರಿಯ ಬದರಿಕಾಶ್ರಮದಲ್ಲಿ ಜನಜಂಗುಳಿಯಿಂದ ದೂರವಾಗಿ, ಭಕ್ತಿಭಾವದಲ್ಲಿ ಮಗ್ನರಾಗಿ ಸಮಾಧಿಸುಖವನ್ನು ಅನುಭವಿಸುತ್ತ ಇನ್ನೂ ಜೀವಿಸುತ್ತಿದ್ದಾರೆ. ವಿಚಾರವಾದಿಗಳು ಇದರ ಬಗ್ಗೆ ಏನೇ ಹೇಳಲಿ, ತಮ್ಮ ಅವತಾರ ಕಾರ್ಯವನ್ನು ಸಮಾಪ್ತಗೊಳಿಸಿದ ಶ್ರೀಮಧ್ವರು ಉಡುಪಿಯನ್ನು ಬಿಟ್ಟು ಅಜ್ಞಾತ ಸ್ಥಳಕ್ಕೆ ಹೋದದ್ದಂತೂ ನಿಜ.

### ಮಧ್ವರ ವ್ಯಕ್ತಿತ್ವದ ವಿಶ್ಲೇಷಣೆ

ಶ್ರೀ ಮಧ್ವಾಚಾರ್ಯರ ಈ ಸಂಕ್ಷಿಪ್ತ ಜೀವನಚರಿತ್ರೆಯು ಅವರ ಮನೋಹರ ವ್ಯಕ್ತಿತ್ವವನ್ನು ಪರಿಚಯಿಸುತ್ತದೆ. ಆಚಾರ್ಯರದು ಸರ್ವತೋಮುಖ ವ್ಯಕ್ತಿತ್ವ. ಅವರು ಅಪ್ರತಿಮ ಮೇಧಾವಿ, ಆಧ್ಯಾತ್ಮಿಕ, ಬೌದ್ಧಿಕ ಮತ್ತು ದೈಹಿಕ ಶಕ್ತಿಸಂಪನ್ನರು. 'ಮಧ್ವವಿಜಯ' ದಲ್ಲಿ ಉಲ್ಲೇಖಿಸಿರುವ ಪವಾಡಗಳ ಮೇಲೆ ನಮ್ಮ ಅಭಿಪ್ರಾಯ ಏನೇ ಇರಬಹುದು, ಒಟ್ಟಾರೆ ಅದು ಬಹುಶಃ ಐತಿಹಾಸಿಕ ಗ್ರಂಥ. ಈ ಗ್ರಂಥದಲ್ಲಿ ಆಚಾರ್ಯರ ಶಾರೀರಿಕ ವ್ಯಕ್ತಿತ್ವವನ್ನು ಮಹಾಪುರುಷರ ಚಿಹ್ನೆಗಳು ಎಂದು ವರ್ಣಿಸಲಾಗಿದೆ. ಅವರ ಮನೋಹರ ವ್ಯಕ್ತಿತ್ವವನ್ನು ಈ ಸುಂದರ ಭಾಷೆಯಲ್ಲಿ

'ಮಧ್ವವಿಜಯ'ವು ವರ್ಣಿಸುತ್ತದೆ: ''ಮಧ್ವಾಚಾರ್ಯರನ್ನು ನೋಡಲು ಅಧಿಕಾಧಿಕ ಸಂಖ್ಯೆಯಲ್ಲಿ ಜನರು ಬರುತ್ತಿದ್ದರು. ಅವರು ಚಂದ್ರನಂತೆ ಶೋಭಿಸುತ್ತಿದ್ದರು. ಅವರದು ಮೃದುವಾದ ಮುಗುಳ್ನಗೆ. ಕಮಲದಂಥ ಕಣ್ಣುಗಳು. ಅವರದು ಬಂಗಾರದ ಬಣ್ಣ. ಅವರ ಮಾತುಗಳಲ್ಲಿ ಕರುಣೆ ತುಳುಕಾಡುತ್ತಿತ್ತು. ಅವರು ನಿಜಕ್ಕೂ ಇಡೀ ಜಗತ್ತಿಗೇ ಭೂಷಣಪ್ರಾಯರು. ಎತ್ತರವಾಗಿ ದೃಢ ಕಾಯವಾಗಿದ್ದ ಶರೀರ ಅವರದು. ಯುವ ಸಿಂಹದಂತಹ ನಡಿಗೆ ಅವರದು. ಅವರ ಕೈ ಮತ್ತು ಕಾಲುಗಳು ಮೊಗ್ಗಿನಂತೆ ಮೃದುವಾಗಿ, ಸುಂದರವಾಗಿ ಕಾಣುತ್ತಿದ್ದವು. ಅವರ ಉಗುರುಗಳು ರತ್ನದಂತೆ ಕೆಂಪಾಗಿದ್ದವು. ಮುಖವು ಚಂದ್ರನಂತೆ ಬೆಳಗುತ್ತಿತ್ತು. ಆದರೆ ಚಂದ್ರನಲ್ಲಿ ಕಾಣಬರುವ ರೇಖೆಗಳು ಅದರಲ್ಲಿ ಇರಲಿಲ್ಲ. ದೇವಸ್ಥಾನದ ದಿವ್ಯ ವಿಗ್ರಹಗಳನ್ನು ಕೆತ್ತುವವರು, ಅವರ ದೇಹವನ್ನೇ ಆ ದೇವತಾ ರೂಪಗಳಿಗೆ ಮಾದರಿಯನ್ನಾಗಿ ಪರಿಗಣಿಸುತ್ತಿದ್ದರು.''

ಮಧ್ವಾಚಾರ್ಯರು ಬೌದ್ಧಿಕ ಮತ್ತು ಆಧ್ಯಾತ್ಮಿಕ ವಿಕಸನಕ್ಕೆ ಮಾತ್ರವಲ್ಲದೆ, ದೇಹವನ್ನು ಕಟ್ಟುಮಸ್ತಾಗಿ ಇಟ್ಟುಕೊಳ್ಳುವ ಕಡೆಯೂ ಬಹಳ ಮಹತ್ವವನ್ನು ನೀಡುತ್ತಿದ್ದರು. ತಮ್ಮ ಬಾಲ್ಯದ ದಿನಗಳಿಂದಲೇ ಆಚಾರ್ಯರು ಒಬ್ಬ ಒಳ್ಳೆಯ ಆಟೋಟಗಾರರಾಗಿದ್ದರು. ಅದರಲ್ಲೂ ಕುಸ್ತಿಯಲ್ಲಿ ಅವರು ಎತ್ತಿದ ಕೈ. ತಮ್ಮ ವೃದ್ಧಾಪ್ಯದ ದಿನಗಳಲ್ಲಿ ಕೂಡ ಅವರು ಪ್ರಸಿದ್ಧ ಕುಸ್ತಿಪಟುಗಳಿಗೇ ಸವಾಲು ಎಸೆಯುತ್ತಿದ್ದರು. ಹತ್ತಿರದ ಸ್ಥಳಗಳಿಗೆ ಕೈಗೊಂಡ ಯಾತ್ರೆಯಲ್ಲದೆ, ಆಚಾರ್ಯರು ಎರಡು ಸಲ ಅಖಂಡ ಭಾರತ ಯಾತ್ರೆಯನ್ನೂ ಕೈಗೊಂಡರು. ಅಲ್ಲೆಲ್ಲ ನಡೆದುಕೊಂಡೇ ಹೋದರು. ಏಕೆಂದರೆ ಆ ಕಾಲದಲ್ಲಿ ಪ್ರಯಾಣ ಸಾಧನಗಳು ಅತಿ ಕಡಮೆ ಪ್ರಮಾಣದಲ್ಲಿ ಇದ್ದವು. ಅವರ ಧ್ವನಿ ದೊಡ್ಡದಾಗಿತ್ತು. ಅದೇ ಸಮಯದಲ್ಲಿ ಗಂಭೀರವಾಗಿತ್ತು. ಸಂಗೀತ ಶ್ರುತಿಗೆ ಹೊಂದುವಂಥ ಮಧುರ ಧ್ವನಿಯೂ ಆಗಿತ್ತು. ಅದೇ ಸಮಯದಲ್ಲಿ ಪ್ರಕ್ಷುಬ್ಧವಾದ ಸಾಗರದ ಮೊರೆತವನ್ನೂ ಮೀರಬಲ್ಲ ಸಿಂಹಗರ್ಜನೆಯೂ ಆದಾಗಿತ್ತು. *(ಮುಂದುವರಿಯುವುದು)*

> 'ಅದ್ವೈತ ಜ್ಞಾನವನ್ನು ನಿನ್ನ ಬಟ್ಟೆಯ ತುದಿಗೆ ಕಟ್ಟಿಕೊಂಡು ಏನು ಮಾಡಬೇಕೆಂದು ಬಯಸುತ್ತೀಯೋ ಅದನ್ನು ಮಾಡು' ಎಂದು ಶ್ರೀರಾಮಕೃಷ್ಣರು ಹೇಳುತ್ತಿದ್ದರು. ಪರಬ್ರಹ್ಮನ ಸಾಕ್ಷಾತ್ಕಾರ ಮಾಡಿಕೊಂಡ ಬಳಿಕ, ಅಥವಾ ಭಗವಂತನಲ್ಲಿ ಪರಮ ಭಕ್ತಿಯನ್ನು ಹೊಂದಿದ ಬಳಿಕ ನೀನು ಯಾವ ಕೆಲಸವನ್ನು ಮಾಡಿದರೂ ಅದು ನಿನ್ನನ್ನು ಬಂಧಿಸದು.
>
> — ಸ್ವಾಮಿ ಬ್ರಹ್ಮಾನಂದರು

# ನಗುವ ಬುದ್ಧ

**ದೊ**ಡ್ಡ ಹೊಟ್ಟೆಯ, ಜೋರಾಗಿ ನಗುವ ಬುದ್ಧನ ಪ್ರತಿಮೆಯನ್ನು ನೀವೆಲ್ಲರೂ ನೋಡಿರಬಹುದು. ಅವನನ್ನು ''ನಗುವ ಬುದ್ಧ''ನೆಂದೇ ಕರೆಯುತ್ತಾರೆ. ಈ ವಿಚಿತ್ರ ರೂಪದ, ವಿಕ್ಷಿಪ್ತ ವ್ಯಕ್ತಿ ನಿಜಕ್ಕೂ ಯಾರು?

## ಹಿನ್ನೆಲೆ

ಮೊದಲು ಈತನಿಗೆ ಹೊತ್ಯೆ, ಬುಡೈ ಅಥವಾ ಪು-ಟೈ (ಚೀನಾದಲ್ಲಿ) ಎಂಬ ಹೆಸರಿತ್ತು. ಅನಂತರ **'ನಗುವ ಬುದ್ಧ'**ನೆಂಬ ಹೆಸರೇ ಜನಪ್ರಿಯವಾಯಿತು. ಸುಮಾರು ಒಂದು ಸಾವಿರ ವರ್ಷಗಳಿಗೆ ಹಿಂದೆ ಚೀನಾದಲ್ಲಿ ಬದುಕಿದ್ದ ವಿಚಿತ್ರ ಸ್ವಭಾವದ ಸಂನ್ಯಾಸಿಯ ರೂಪವನ್ನಾಧರಿಸಿ, ನಗುವ ಬುದ್ಧನ ಮೂರ್ತಿಯನ್ನು ಮಾಡಲಾಗಿದೆ. ಬೌದ್ಧ ಮತ್ತು ಶಿಂಟೋ ಸಂಸ್ಕೃತಿಗಳಲ್ಲಿ ಈ ಮೂರ್ತಿ ಪ್ರಮುಖವಾದ ಸಂಕೇತವಾಗಿದೆ.

ಅಕ್ಷರಶಃ ಪು-ಟೈ ಎಂದರೆ ಚಿಂದಿಬಟ್ಟೆಯ ಚೀಲ ಎಂದರ್ಥ. ನಿಜವಾಗಿ ಪು-ಟೈ ಎಂಬವನು ಅನುಕಂಪದಿಂದ ಕೂಡಿದ, ಉದಾರ ಹೃದಯದ ಝೆನ್ ಸಂತ. ಭವಿಷ್ಯದಲ್ಲಿ ಬರುವ ಬುದ್ಧನಾದ ಮೈತ್ರೇಯನೇ ಅವನು ಎನ್ನುವುದೂ ಇದೆ. ಅವನ ಉದಾರವಾದ ನಗು ಅವನಿಗೆ 'ನಗುವ ಬುದ್ಧ'ನೆಂಬ ಅಡ್ಡ ಹೆಸರನ್ನು ತಂದಿತು.



## ನಗುವ ಬುದ್ಧನ ಕಥೆ

ಹಳೆಯ ದಂತಕತೆಗಳ ಪ್ರಕಾರ ಪು-ಟೈ ಸದಾ ಆನಂದದಿಂದಿದ್ದ ಬೌದ್ಧ ಸಂನ್ಯಾಸಿ; ಅವನು ಊರಿಂದೂರಿಗೆ ಅಲೆದಾಡುತ್ತಿದ್ದ. ಹೋದಲೆಲ್ಲ ಶಾಂತಿ, ಆನಂದಗಳನ್ನು ಹರಡುತ್ತಿದ್ದ. ಜನ ಅವನತ್ತ ಆಕರ್ಷಿತರಾದರು. ಅವನ ಸುತ್ತ ಮಕ್ಕಳು ಮುತ್ತುತ್ತಿದ್ದರು. ಅವನ ಚೀಲದಲ್ಲಿ ಸಿಹಿತಿಂಡಿ, ಆಟಿಕೆಗಳಿರುತ್ತಿದ್ದವು. ಅವುಗಳನ್ನು ಮಕ್ಕಳಿಗೆ ಹಂಚುತ್ತಿದ್ದ. ಅನಂತರ ಚೀಲವನ್ನು ಎಸೆದು, ಆಕಾಶದತ್ತ ನೋಡಿ ಜೋರಾಗಿ ನಗುತ್ತಿದ್ದ. ಅವನ ನಗುವನ್ನು ಕೇಳಿದ ಜನರೆಲ್ಲ ನಗುವ ಜಾಡ್ಯಕ್ಕೆ ಒಳಗಾಗಿ, ಬಿದ್ದು ಬಿದ್ದು ನಗತೊಡಗುತ್ತಿದ್ದರು. ಹೀಗೆ ಊರೆಲ್ಲ ನಗುತ್ತಿದ್ದಾಗ ಅವನು ಸದ್ದಿಲ್ಲದೆ ಚೀಲವನ್ನೆತ್ತಿಕೊಂಡು ಇನ್ನೊಂದು ಊರಿಗೆ ಹೋಗುತ್ತಿದ್ದ. ಹೀಗೆ ಅವನು ಎಲ್ಲೆಡೆ ಶಾಂತಿ, ಆನಂದಗಳನ್ನು ಹರಡುತ್ತಿದ್ದ.

ಪು-ಟೈ ಮಿತಭಾಷಿ. ಸಿಹಿತಿಂಡಿ ಹಂಚುತ್ತಿದ್ದುದರ ಅರ್ಥವೇನೆಂದರೆ, 'ನೀನು ಕೊಟ್ಟಷ್ಟೂ ನಿನಗೆ ಮರಳಿ ಬರುವುದು.' ಚೀಲವೇ ಜನರ ಸಮಸ್ಯೆಗಳಿಗೆ ಸಂಕೇತ. ಅವುಗಳಿಗಾಗಿ ಚಿಂತಿಸುವ ಬದಲು, ಅವನ್ನು ದೂರ ಬಿಸುಟು, ಎಲ್ಲವನ್ನೂ ಮರೆತು ನಗಬೇಕು. ಏಕೆಂದರೆ, ಅತ್ತರೂ ಸರಿ, ನಕ್ಕರೂ ಸರಿ; ಸಮಸ್ಯೆ ಮಾತ್ರ ಹಾಗೆಯೇ ಇರುತ್ತದೆ. ನಗುವಿನ ಪರಿಣಾಮ ಅತ್ಯದ್ಭುತ. ಅದರಿಂದ ದೇಹ, ಮನಸ್ಸು ಹೆಚ್ಚು ವಿಶ್ರಾಂತಿ ಪಡೆಯುತ್ತವೆ. ಸಮಸ್ಯೆಗಳು ಹಗುರವಾಗುತ್ತವೆ. ಸಹಸ್ರ ವರ್ಷಗಳಿಗೂ ಮುನ್ನ ಆ ವ್ಯಕ್ತಿಯ ತಿಳುವಳಿಕೆ ಆಶ್ಚರ್ಯ ಹುಟ್ಟಿಸುತ್ತದೆ. ಏಕೆಂದರೆ, ನಗುವಿನಿಂದ ಉತ್ತಮ ಹಾರ್ಮೋನುಗಳು ಉತ್ಪನ್ನವಾಗಿ, ದೇಹದ ಆರೋಗ್ಯ ಉತ್ತಮಗೊಳ್ಳುವುದೆಂದು ಈಚೆಗೆ ವೈದ್ಯಕೀಯ ವಿಜ್ಞಾನ ಹೇಳುತ್ತದೆ.

ನಗುವ ಬುದ್ಧನ ಸಾವಿನಲ್ಲೂ ಅತಿದೊಡ್ಡ ವಿನೋದವಿತ್ತು. ಸತ್ತ ನಂತರ ತನ್ನ ದೇಹವನ್ನು ಸುಡಲು ಅವನು ಹೇಳಿದ. ಝೆನ್ ಪದ್ಧತಿ ಪ್ರಕಾರ ಸತ್ತವರನ್ನು ಸುಡುತ್ತಿರಲಿಲ್ಲ. ಆದರೂ ಅವನ ಬಯಕೆಯಂತೆ ಅವನ ದೇಹವನ್ನು ಸುಟ್ಟರು. ಶವಕ್ಕೆ ಬೆಂಕಿ ಹತ್ತಿಸಿದೊಡನೆ ಎಲ್ಲೆಡೆ ಪಟಾಕಿ ಸಿಡಿಯತೊಡಗಿತು! ತನ್ನ ಬಟ್ಟೆಯೊಳಗೆಲ್ಲ ತುಂಬಾ ಸಿಡಿಮದ್ದನ್ನು ತುಂಬಿಕೊಂಡಿದ್ದ ಪು-ಟೈ!

ಹೀಗೆ ಮಸಣದಲ್ಲೂ ನಗುತ್ತಲೇ ಮಣ್ಣಾದ 'ನಗುವ ಬುದ್ಧ.'

*ಸಂಗ್ರಹ : ಸ್ವಾಮಿ ಪುಣ್ಯಾತ್ಮಾನಂದ*

# ಭಕ್ತ ನಿಳೋಬ

ಕಥೆ : ಕೆ ಅಳಗರಾಜ
ಚಿತ್ರ: ಗೋವಿ



1 ಅದು ಸಂತ ತುಕಾರಾಮನ ಮಹಿಮೆ ಹೆಚ್ಚು ಪ್ರಚಾರವಾಗುತ್ತಿದ್ದ ಕಾಲ. ಮಹಾರಾಷ್ಟ್ರದ ಪಿಂಪಳ್ನೇರ್ ಎಂಬಲ್ಲಿ ನಿಳೋಬ ಎಂಬ ಪಾಂಡುರಂಗನ ಭಕ್ತನೊಬ್ಬ ವಾಸಿಸುತ್ತಿದ್ದ.ಒಂದು ದಿನ ಅವನು ಭಜನೆಗಳನ್ನು ಹಾಡುತ್ತ ನಿದ್ದೆ ಹೋದ. ಕನಸಿನಲ್ಲಿ ಸಂತ ತುಕಾರಾಮ ಕಾಣಿಸಿಕೊಂಡ ...



2




ಜೈ ವಿಠಲ! ಅದು ವಿಠಲನ ಇಚ್ಛೆಯಾಗಿದ್ದರೆ, ಹಾಗೆಯೇ ಆಗಲಿ. ಇಂದಿನಿಂದ ನೀನು 'ರಾಮಕೃಷ್ಣ ಹರಿ' ಎಂಬ ದೇವರ ನಾಮವನ್ನು ಜಪಿಸುತ್ತಾ ಹೋಗು.

3 ನಿದ್ದೆ ಬಿಟ್ಟು ಎದ್ದ ನಂತರ ನಿಳೋಬನು ತನ್ನ ಪತ್ನಿಗೆ ಹೇಳಿದ ...

ಆಹಾ! ಎಂಥ ಕನಸನ್ನು ಕಂಡೆ! ಕನಸಿನಲ್ಲಿ ನಾನು ನನ್ನ ಗುರುವನ್ನು ಕಂಡೆ.

ಹೌದೆ? ಕನಸಿನಲ್ಲಿ ಬಂದ ನಿಮ್ಮ ಗುರುವನ್ನು ನೀವು ಯಾವಾಗ ಭೇಟಿಯಾಗುತ್ತೀರಿ?

ಗುರು ದೂರದ ಊರಾದ ದೇಹು ಎಂಬಲ್ಲಿದ್ದಾನೆ. ಅವನ ದರ್ಶನವನ್ನು ನಾನು ಹೇಗೆ ಪಡೆಯಲಿ? ವಿಠಲಾ, ನೀನೇ ನನಗೆ ದಾರಿ ತೋರಿಸಿಕೊಡಬೇಕು.



ನಿಳೋಬನು ಯಾವಾಗಲೂ ವಿಠಲನನ್ನೇ ಧ್ಯಾನಿಸುತ್ತ 'ರಾಮಕೃಷ್ಣ ಹರಿ' ಎಂಬ ಮಂತ್ರವನ್ನೇ ಜಪಿಸುತ್ತಿದ್ದ. ಯಾವುದೇ ಕೆಲಸವನ್ನು ಮಾಡುವಾಗಲೂ ಹಾಗೆ ಜಪಿಸುತ್ತಾ ವಿಠಲ ಹಾಗೂ ಗುರುವನ್ನು ನೆನೆಯುತ್ತಿದ್ದ.

4 ಕೆಲವು ವರ್ಷಗಳ ನಂತರ ...
ನಿಳೋಬನ ಮಗಳ ಮದುವೆ ನಿಶ್ಚಯವಾಯಿತು.

ಸ್ವಾಮಿ, ಮದುವೆ ಊಟಕ್ಕೆ ಬೇಕಾದ ಸಾಮಾನುಗಳು ಸಾಲದು.



ಹೌದು. ಆದರೆ ವಿಠಲನ ಪಾದಗಳಲ್ಲಿ ಶರಣಾಗುವುದಲ್ಲದೆ ನಮಗೆ ಬೇರೆ ಯಾವ ದಾರಿಯೂ ಇಲ್ಲ. ಅವನೇ ನಮ್ಮ ರಕ್ಷಕನಲ್ಲವೆ? ನೀನೇನೂ ಚಿಂತಿಸಬೇಡ.


5 ಅಲ್ಲೊಬ್ಬ ದಾರಿಹೋಕ ...
ಸ್ವಾಮಿ, ಯಾರು ನೀವು? ನಿಮಗೆ ಏನಾಗಬೇಕು?
ನನಗೆ ಒಂದಿಷ್ಟು ಹಸಿವಾಗಿದೆ, ನನ್ನ ಬಳಿ ಕೆಲವು ವಸ್ತುಗಳಿವೆ. ಅವುಗಳನ್ನು ನೀವು ಸ್ವೀಕರಿಸಿ, ನನಗೆ ಒಂದಿಷ್ಟು ಆಹಾರ ಕೊಡಿ.
ಸ್ವಾಮಿ, ದಯವಿಟ್ಟು ಬನ್ನಿ.. ಊಟಮಾಡಿ. ಆಹಾರಕ್ಕಾಗಿ ನೀವು ಏನನ್ನಾದರೂ ನೀಡಬೇಕೆ? ಖಂಡಿತ ವಿಠಲನು ನಮ್ಮನ್ನು ಆ ಪರಿಸ್ಥಿತಿಗೆ ತಂದಿಲ್ಲ.


6 ಇಲ್ಲೇಕೆ ಅಷ್ಟೊಂದು ವಸ್ತುಗಳಿವೆ? ಏನಾದರೂ ಸಮಾರಂಭ ನಡೆಯುವುದೆ?
ಹೌದು ಸ್ವಾಮಿ, ನಾಳೆ ನನ್ನ ಮಗಳ ಮದುವೆ ನಡೆಯಲಿದೆ. ಮದುವೆ ಔತಣಕ್ಕಾಗಿ ನಾವು ತಯಾರಿ ನಡೆಸಬೇಕಾಗಿದೆ. ಅಷ್ಟೊಂದು ಮಂದಿ ಅತಿಥಿಗಳಿಗೆ ಅಡುಗೆ ಮಾಡುವುದು ಹೇಗೆಂದು ನಮಗೆ ಚಿಂತೆಯಾಗಿದೆ.
ನೀವೇನೂ ಚಿಂತಿಸಬೇಡಿ. ನನಗೆ ಅಡುಗೆ ಮಾಡಿ ತುಂಬ ಅನುಭವವಿದೆ. ನನಗೆ ಏನೇನು ಸಾಧ್ಯವೋ ಎಲ್ಲ ಸಹಾಯವನ್ನೂ ಮಾಡುತ್ತೇನೆ.
ಸ್ವಾಮಿ ನಿಮ್ಮನ್ನು ವಿಠಲ ದೇವರೇ ಕಳುಹಿಸಿರಬೇಕು ಎಂದು ನನಗನ್ನಿಸುತ್ತದೆ.


7 ಮರುದಿನ ವರನ ಕಡೆಯವರು ಬಹಳ ಸಂಭ್ರಮದಿಂದ ಆಗಮಿಸಿದರು. ಇದ್ದಕ್ಕಿದ್ದಂತೆ ಮದುವೆ ಊಟಕ್ಕೆ ಬೇಕಾದ ವಸ್ತುಗಳು ಭಾರೀ ಪ್ರಮಾಣದಲ್ಲಿ ಬಂದವು.
ಸ್ವಾಮಿ, ಈ ವಸ್ತುಗಳೆಲ್ಲ ಇದ್ದಕ್ಕಿದ್ದಂತೆ ಬಂದವು. ಅತಿಥಿಗಳೂ ಬಂದರು. ಇವನ್ನೆಲ್ಲ ಹೇಗೆ ತಯಾರು ಮಾಡೋಣ? ವಿಠಲಾ!
ನಿಕೋಬ, ನೀವು ಅತಿಥಿಗಳನ್ನು ಚೆನ್ನಾಗಿ ನೋಡಿಕೊಳ್ಳಿ. ಇಲ್ಲಿನದನ್ನೆಲ್ಲ ನಾನು ನಿಭಾಯಿಸುತ್ತೇನೆ. ನೀವೇನೂ ಚಿಂತಿಸಬೇಡಿ.
ಅವರಿಗೆ ಬೇರೆ ಯಾವ ಸಹಾಯವೂ ಬೇಡವೆಂದು ಆ ಹಿರಿಯರು ಹೇಳುತ್ತಾರೆ. ಅವರೊಬ್ಬರೇ ಹೇಗೆ ನಿಭಾಯಿಸುತ್ತಾರೋ!


8 ಮದುವೆ ಸಮಾರಂಭ ಮುಗಿದು, ಊಟದ ವೇಳೆ ಸಮೀಪಿಸಿತು.
ಅಹ ! ಎಂಥ ರುಚಿಕರವಾದ ಊಟ! ಏನು ಪರಿಮಳ!
ಓ! ಪಾಯಸ ಎಷ್ಟೊಂದು ರುಚಿಯಾಗಿದೆ! ಅದ್ಭುತ!


9 ಆಹಾಹಾ! ಎಲ್ಲರೂ ಎಷ್ಟೊಂದು ಸಂತೋಷದಿಂದ ಊಟ ಮಾಡುತ್ತಿದ್ದಾರೆ!
ಇದೇನು ಆಶ್ಚರ್ಯ! ಆ ಹಿರಿಯ ವ್ಯಕ್ತಿ ಎಡೆಬಿಡದೆ ಕೆಲಸ ಮಾಡುತ್ತಿದ್ದಾನೆ. ಪಂಡರೀನಾಥ ಸ್ವಾಮಿಯೇ ಅವನನ್ನು ಸರಿಯಾದ ವೇಳೆಗೆ ಕಳುಹಿಸಿರಬೇಕು. ವಿಠಲಾ! ನಿನ್ನ ದಯೆಗೆ ಎಣೆಯೇ ಇಲ್ಲ!

10



ಒಳ್ಳೆಯದು ... ಎಂಥ ಭೋಜನ! ಇಂಥ ಅದ್ಭುತವಾದ ಊಟವನ್ನು ನಾವು ಇದುವರೆಗೆ ಮಾಡಿಲ್ಲ. ಅಡುಗೆ ಯಾರದು?
ಮೊದಲು ತಾಂಬೂಲ ಸ್ವೀಕರಿಸಿ, ಸ್ವಾಮಿ. ನಾನೇ ಅಡುಗೆ ಮಾಡಿದೆ.


11



ನಿಳೋಬ ಅವರೆ, ನಮ್ಮ ಮಗನಿಗೆ ಭಜನೆ ಮಾಡುವವರ ಮಗಳನ್ನು ಸೊಸೆಯಾಗಿ ತಂದುಕೊಳ್ಳುತ್ತಿದ್ದೇನೆ ಎಂದು ಬಹಳ ಮಂದಿ ನಮ್ಮನ್ನು ಹಾಸ್ಯ ಮಾಡಿದರು. ನೀವು ಇಷ್ಟು ವಿಜೃಂಭಣೆಯಿಂದ ಮದುವೆ ಮಾಡಿಸಿ, ಅವರೆಲ್ಲ ಬಾಯಿ ಮುಚ್ಚಿಸಿ ಬಿಟ್ಟಿರಿ.
ಎಲ್ಲವೂ ವಿಠಲನ ಕೃಪೆಯಿಂದಲೇ ನಡೆಯಿತು.


12



ಸ್ವಾಮಿ, ನೀವು ನಮಗೆ ಮಾಡಿದ ಉಪಕಾರವನ್ನು ನಾವು ಹೇಗೆ ಹಿಂದಿರುಗಿಸೋಣ? ದಯವಿಟ್ಟು ನಮ್ಮ ಈ ಸಣ್ಣ ಕಾಣಿಕೆಯನ್ನು ಸ್ವೀಕರಿಸಿ.
ಸ್ವಲ್ಪ ತಡೆಯಿರಿ. ನಾನೇ ದೇವರ ಕೋಣೆಗೆ ಹೋಗಿ ಬರುತ್ತೇನೆ.


13



ಆ ಹಿರಿಯರು ದೇವರ ಕೋಣೆಯಿಂದ ಹಿಂದಿರುಗಿ ಬರಲೇ ಇಲ್ಲವಲ್ಲ?
ಆಹ! ದೇವರ ಕೋಣೆಯಲ್ಲಿ ಯಾರೂ ಇಲ್ಲವಲ್ಲ! ಇದೂ ವಿಠಲನ ಲೀಲೆಯೇ ಹಾಗಾದರೆ?
ರಾಮಕೃಷ್ಣ ಹರಿ! ರಾಮಕೃಷ್ಣ ಹರಿ!
ವಿಠಲನ ದಯೆಯನ್ನು ನೆನೆದು ನಿಳೋಬ 'ರಾಮಕೃಷ್ಣ ಹರಿ' ಎಂದು ಹಾಡತೊಡಗಿದ.

14

ಇನ್ನೊಂದು ದಿನ ನಿಳೋಬನಿಗೆ ಕನಸಿನಲ್ಲಿ ತುಕಾರಾಮ ಕಾಣಿಸಿಕೊಂಡ. ತನ್ನನ್ನು ಭೇಟಿಯಾಗುವಂತೆ ಅವನು ನಿಳೋಬನಿಗೆ ಹೇಳಿದ. ಕೂಡಲೇ ನಿಳೋಬನು ದೇಹುಗೆ ಹೋದನು. ಆದರೆ ಕೆಲವೇ ದಿನಗಳ ಮುನ್ನ ತುಕಾರಾಮ ಭಗವಂತನ ಪಾದ ಸೇರಿದ್ದ. ತುಕಾರಾಮನನ್ನು ಕಾಣದೆ ಹಿಂದಿರುಗಲಾರೆ ಎಂದು ನಿಳೋಬನು ಧ್ಯಾನಕ್ಕೆ ಕುಳಿತ.

15

ಅವನ ಮುಂದೆ ಪಾಂಡುರಂಗ ವಿಠಲನೇ ಕಾಣಿಸಿಕೊಂಡ.




16




''ಆತನ ಸಾಕ್ಷಾತ್ಕಾರಕ್ಕೆ ಆತನಲ್ಲಿ ವಿಶ್ವಾಸವಿರುವುದು ಮತ್ತು ಆತನಿಗೆ ಶರಣಾಗತನಾಗುವುದು ಇವೆರಡೂ ಆವಶ್ಯಕ. ಸ್ವಾಭಾವಿಕವಾಗಿ ಮನುಷ್ಯ ಅಜ್ಞಾನಿ. ತಪ್ಪುವುದು ಸ್ವಾಭಾವಿಕ. ಒಂದು ಸೇರಿನ ಗಡಿಗೆಯಲ್ಲಿ ನಾಲ್ಕು ಸೇರು ಹಾಲು ಹಿಡಿಯಬಲ್ಲುದೆ? ಆದರೆ ಯಾವ ಮಾರ್ಗ ಅನುಸರಿಸಿದರೂ ಸರಿಯೆ. ವ್ಯಾಕುಲ ಚಿತ್ತದಿಂದ ಆತನನ್ನು ಕರೆಯಬೇಕು. ಆತ ಅಂತರ್ಯಾಮಿ. ಹೃತ್ಪೂರ್ವಕವಾದ ಕರೆಗೆ ಆತ ಕಿವಿಗೊಟ್ಟೇಗೊಡುತ್ತಾನೆ. ವ್ಯಾಕುಲನಾಗಿ ಸಾಕಾರವಾದಿಗಳ ಮಾರ್ಗದಲ್ಲಾದರೂ ಹೋಗು, ನಿರಾಕಾರವಾದಿಗಳ ಮಾರ್ಗದಲ್ಲಾದರೂ ಹೋಗು, ಆತನೇ ದೊರೆಯುತ್ತಾನೆ.''

— ಶ್ರೀರಾಮಕೃಷ್ಣರು








# ದಾವಣಗೆರೆಯಲ್ಲಿ ರಾಮಕೃಷ್ಣ ಮಿಷನ್ ಆಶ್ರಮದ ಉದ್ಘಾಟನೆ

ಶ್ರೀರಾಮಕೃಷ್ಣ ಪರಮಹಂಸರ ೧೮೩ನೇ ಜಯಂತಿಯ ಶುಭ ಸಂದರ್ಭದಲ್ಲಿ **ದಾವಣಗೆರೆ ಶ್ರೀರಾಮಕೃಷ್ಣ ಆಶ್ರಮವನ್ನು** ರಾಮಕೃಷ್ಣ ಮಹಾಸಂಘಕ್ಕೆ ಹಸ್ತಾಂತರಿಸುವ ಮೂಲಕ ರಾಮಕೃಷ್ಣ ಮಿಷನ್ ಆಶ್ರಮ, ದಾವಣಗೆರೆ ಇದರ ಉದ್ಘಾಟನಾ ಕಾರ್ಯಕ್ರಮವು ನಡೆಯಿತು. ಈ ಮೂಲಕ **'ರಾಮಕೃಷ್ಣ ಮಿಷನ್ ಆಶ್ರಮ, ದಾವಣಗೆರೆ'**ಯು ರಾಮಕೃಷ್ಣ ಮಠ ಮತ್ತು ಮಿಷನ್, ಪ್ರಧಾನ ಕೇಂದ್ರ, ಬೇಲೂರು ಮಠ, ಹೌರಾ ಜಿಲ್ಲೆ, ಪಶ್ಚಿಮ ಬಂಗಾಳ ಇದರ **ಕರ್ನಾಟಕ**ದಲ್ಲಿನ ೮ನೇ ಶಾಖಾಕೇಂದ್ರವಾಗಿ ಸೇರ್ಪಡೆಗೊಂಡು, ಈಗಾಗಲೇ ಕಟ್ಟಡ ನಿರ್ಮಾಣ ಹಾಗೂ ಇನ್ನಿತರ ಸೇವಾಕಾರ್ಯಗಳನ್ನು ಆರಂಭಿಸಲಾಗಿದೆ.

ಶ್ರೀರಾಮಕೃಷ್ಣರ ಜಯಂತಿಯ ಸಂದರ್ಭದಲ್ಲಿ ನಡೆದ ವಿಶೇಷ ಪೂಜೆ, ಶ್ರೀರಾಮಕೃಷ್ಣ ಹೋಮ ಇವುಗಳ ನಂತರ ದಾವಣಗೆರೆ ಶ್ರೀರಾಮಕೃಷ್ಣ ಆಶ್ರಮವನ್ನು ರಾಮಕೃಷ್ಣ ಮಹಾಸಂಘಕ್ಕೆ ಹಸ್ತಾಂತರಿಸುವ ಕಾರ್ಯಕ್ರಮ ನಡೆಯಿತು. ದಾವಣಗೆರೆ ಮಿಷನ್ ಆಶ್ರಮದ ಕಾರ್ಯದರ್ಶಿಗಳಾಗಿ ನಿಯುಕ್ತರಾದ ಪೂಜ್ಯ ಸ್ವಾಮಿ ನಿತ್ಯಸ್ಥಾನಂದಜಿ ಮಹಾರಾಜ್, ಸಹಾಯಕರಾಗಿ ನಿಯುಕ್ತರಾದ ಸ್ವಾಮಿ ತ್ಯಾಗೀಶ್ವರಾನಂದಜಿ, ರಾಮಕೃಷ್ಣ ಮಹಾಸಂಘದ ಇತರ ಸಂನ್ಯಾಸಿಗಳು, 'ದಾವಣಗೆರೆ ಶ್ರೀರಾಮಕೃಷ್ಣ ಆಶ್ರಮ'ದ ಹಿಂದಿನ ಪದಾಧಿಕಾರಿಗಳಾದ ಶ್ರೀರಮೇಶ್ ಬಾಬು, ಬ್ರಹ್ಮಚಾರಿ ಹೇಮಂತ ಕುಮಾರ್, ಶ್ರೀ ಶಾಂತಿನಾಥ, ಶ್ರೀ ಗೋವಿಂದಪ್ಪ ಮುಂತಾದವರು ಈ ಸಂದರ್ಭದಲ್ಲಿ ಉಪಸ್ಥಿತರಿದ್ದರು.

ಈ ಸಂದರ್ಭದಲ್ಲಿ ನಾರಾಯಣ ಸೇವೆ, ಜೀವಂತ ದುರ್ಗಾ ಪೂಜೆ ಹಾಗೂ ವಿದ್ಯಾರ್ಥಿಗಳಿಗೆ ಪುಸ್ತಕ ಹಾಗೂ ಇತರ ಶಾಲಾ ಸಾಮಗ್ರಿಗಳನ್ನು ಹಂಚುವ ಕಾರ್ಯಕ್ರಮಗಳು ನಡೆದವು. ಶ್ರೀರಾಮಕೃಷ್ಣರ ಜನ್ಮ ಮಹೋತ್ಸವದ ಆಚರಣೆಯ ಪ್ರಯುಕ್ತ ಸುಮಾರು ೧೫೦೦೦ಕ್ಕೂ ಹೆಚ್ಚು ಮಂದಿ ಭಕ್ತರು ಆಶ್ರಮದಲ್ಲಿ ಪ್ರಸಾದ ಸ್ವೀಕರಿಸಿದರು.








# ಮೈಸೂರಿನಲ್ಲಿ ಶ್ರೀ ರಾಮಕೃಷ್ಣ ಪರಮಹಂಸ ವೃತ್ತ ಉದ್ಘಾಟನೆ

ಮೈಸೂರು ನಗರದ ರಾಮಕೃಷ್ಣನಗರದಲ್ಲಿ ಅತ್ಯಂತ ಪ್ರಮುಖ ಹಾಗೂ ಕೇಂದ್ರ ಸ್ಥಳದಲ್ಲಿ ಶ್ರೀರಾಮಕೃಷ್ಣ ಪರಮಹಂಸರ ವಿಗ್ರಹ ವಿರುವ ವೃತ್ತವನ್ನು ದಿನಾಂಕ ೫.೦೩.೨೦೧೮ ರಂದು ಸಂಜೆ ೭ ಗಂಟೆಗೆ ಉದ್ಘಾಟಿಸಲಾಯಿತು. ಕರ್ನಾಟಕ ಮುಖ್ಯಮಂತ್ರಿಗಳಾದ ಸನ್ಮಾನ್ಯ ಶ್ರೀ ಸಿದ್ದರಾಮಯ್ಯನವರು ಈ ವೃತ್ತವನ್ನು ಉದ್ಘಾಟಿಸಿ, ಪ್ರತಿಮೆಯ ಅನಾವರಣ ಮಾಡಿದರು.

ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರವು ನಿರ್ಮಿಸಿದ ಈ ವೃತ್ತದಲ್ಲಿ ೧೦ ಎಡಿ ಎತ್ತರದ ಶ್ರೀರಾಮಕೃಷ್ಣರ ಪ್ರತಿಮೆಯನ್ನು ಸ್ಥಾಪಿಸಲಾಗಿದೆ. ಗೋಲಾಕೃತಿಯ ಮಂಟಪದಲ್ಲಿ ಸ್ಥಾಪಿಸಿದ ಈ ವೃತ್ತ ಪ್ರತಿಮೆಯ ಹಾಗೂ ನಿರ್ಮಾಣಕಾರ್ಯಕ್ಕೆ ೫ ಕೋಟಿ ರೂ.ಗಳನ್ನು ಖರ್ಚು ಮಾಡಲಾಗಿದೆ. ಮೈಸೂರಿನ ಪ್ರಸಿದ್ಧ ಶಿಲ್ಪಿಗಳಾದ ಶ್ರೀ ಅರುಣ್ ಯೋಗಿರಾಜ್ ಅವರು ಈ ಸುಂದರ ಪ್ರತಿಮೆಯನ್ನು ನಿರ್ಮಿಸಿದ್ದಾರೆ.

ಉದ್ಘಾಟನಾ ಕಾರ್ಯಕ್ರಮದಲ್ಲಿ ಸನ್ಮಾನ್ಯ ಮುಖ್ಯಮಂತ್ರಿಯವರೊಂದಿಗೆ ಮಂತ್ರಿಮಂಡಲದ ವಿವಿಧ ಸದಸ್ಯರು, ಪದಾಧಿಕಾರಿಗಳು, ವಿವಿಧ ಇಲಾಖೆಗಳ ಮುಖ್ಯಸ್ಥರು, ಜಿಲ್ಲಾ ಪಂಚಾಯತ್‌ನ ವಿವಿಧ ಪದಾಧಿಕಾರಿಗಳು ಉಪಸ್ಥಿತರಿದ್ದರು.

ರಾಮಕೃಷ್ಣ ವಿದ್ಯಾಶಾಲೆಯ ವಿದ್ಯಾರ್ಥಿಗಳು ಪ್ರಾರ್ಥನೆ ಹಾಡುವುದರೊಂದಿಗೆ ಸಭಾಕಾರ್ಯಕ್ರಮ ಆರಂಭವಾಯಿತು. ದಿವ್ಯಸಾನ್ನಿಧ್ಯ ವಹಿಸಿ ಶ್ರೀರಾಮಕೃಷ್ಣರಿಗೆ ಆರತಿ ಬೆಳಗಿದ ಮೈಸೂರು ರಾಮಕೃಷ್ಣ ಆಶ್ರಮದ ಅಧ್ಯಕ್ಷರಾದ ಸ್ವಾಮಿ ಆತ್ಮಜ್ಞಾನಂದಜಿಯವರು ಆಶೀರ್ವಚನ ನೀಡಿ ಸಮಸ್ತ ನಾಗರಿಕರಿಗೆ ಶುಭಕೋರಿದರು. ಪೊನ್ನಂಪೇಟೆ ರಾಮಕೃಷ್ಣ ಶಾರದಾಶ್ರಮದ ಅಧ್ಯಕ್ಷರಾದ ಸ್ವಾಮಿ ಬೋಧಸ್ವರೂಪಾನಂದಜಿ ಸಭೆಯಲ್ಲಿ ಉಪಸ್ಥಿತರಿದ್ದರು. ಬಳಿಕ ಗಣ್ಯರೆಲ್ಲರೂ ಶ್ರೀರಾಮಕೃಷ್ಣರ ಪ್ರತಿಮೆಗೆ ಪುಷ್ಪಾರ್ಚನೆ ಮಾಡಿದರು.

ಲೋಕೋಪಯೋಗಿ ಸಚಿವರೂ, ಮೈಸೂರು ಜಿಲ್ಲಾ ಉಸ್ತುವಾರಿ ಸಚಿವರಾದ ಡಾ. ಹೆಚ್.ಸಿ. ಮಹದೇವಪ್ಪ, ವಿಧಾನ ಸಭಾ ಸದಸ್ಯರಾದ ಶ್ರೀ ಜಿ.ಟಿ. ದೇವೇಗೌಡ, ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರಾದ ಶ್ರೀ ಡಿ.ಧ್ರುವಕುಮಾರ್ ಮೊದಲಾದವರು ಈ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು.

ಅಪಾರ ಸಂಖ್ಯೆಯಲ್ಲಿ ನೆರೆದಿದ್ದ ನಾಗರಿಕರು ಹಾಗೂ ಭಕ್ತರು ಈ ಉದ್ಘಾಟನಾ ಕಾರ್ಯಕ್ರಮದಲ್ಲಿ ಪಾಲ್ಗೊಂಡು, ವೃತ್ತ ಹಾಗೂ ಪ್ರತಿಮೆಯ ಅನಾವರಣದಲ್ಲಿ ಸಾಕ್ಷಿಯಾಗಿ ಭಾಗವಹಿಸಿದ್ದುದು ವಿಶೇಷವಾಗಿತ್ತು.







Managing Editor : Swami Atmajnananda Editor : Swami Jnanayogananda

Printed and Published by Swami Atmajnananda, on behalf of Sri Ramakrishna Ashrama, Yadavagiri, Mysore and Printed at Mayur Graphics, No.C-12, Industrial Estate, Rajaji Nagar, Bangalore -560 010 and published at Sri Ramakrishna Ashrama, Yadavagiri, Mysore -570 020

# ಆರ್ಕಿಡ್ ಟ್ರಾವೆಲ್ & ಟೂರ್ಸ್

Orchid
Travel & Tours



## ಹಿರಿಯರಿಗೆ ವಿಶೇಷ ರಿಯಾಯಿತಿ ದರದಲ್ಲಿ ಅಮೆರಿಕಾ ಪ್ರವಾಸ-2018

### 18 ಮತ್ತು 13 ದಿನಗಳ ಅಮೇರಿಕಾ ಪ್ರವಾಸ

ಪ್ರವಾಸ ಸ್ಥಳ : ನ್ಯೂಯಾರ್ಕ್, ವಾಷಿಂಗ್ಟನ್, ನಯಾಗರ ಫಾಲ್ಸ್, ಲಾಸ್‌ವೆಗಾಸ್, ಲಾಸ್ ಏಂಜಲೀಸ್, ಸ್ಯಾನ್‌ಫ್ರಾನ್ಸಿಸ್‌ಕೋ

### 10 ದಿನಗಳ ಸಿಂಗಾಪುರ-ಮಲೇಶಿಯ-ಥೈಲ್ಯಾಂಡ್ ಪ್ರವಾಸ

ಸಿಂಗಾಪುರ : ಸಿಟಿ ಟೂರ್, ಸೆಂಟೋಸ ಐಲ್ಯಾಂಡ್ ಜೊತೆಗೆ ಸಿ ಅಕ್ವೇರಿಯಂ, ವಿಂಗ್ಸ್ ಆಫ್ ಟೈಮ್,
ಜುರೋಂಗ್ ಬರ್ಡ್‌ಪಾರ್ಕ್, ಯುನಿವರ್ಸಲ್ ಸ್ಟುಡಿಯೋ,
ಮಲೇಶಿಯ : ಕೌಲಾಲಂಪುರ್ ಸಿಟಿ ಟೂರ್, ಬಾಟು ಗುಹೆ, ಪುತ್ರಜಯ, ಜಂಟಿಂಗ್ ಹೈಲ್ಯಾಂಡ್, ಕೆ.ಎಲ್. ಟವರ್
ಥೈಲ್ಯಾಂಡ್ - ಪಟ್ಟಾಯ, ಕೋರಲ್ ಐಲ್ಯಾಂಡ್, ಸಫಾರಿ ವರ್ಲ್ಡ್ ಹಾಗೂ ಬ್ಯಾಂಕಾಕ್ ಸಿಟಿ ಟೂರ್, ಮರೀನಾ ಪಾರ್ಕ್, ವಾಕರ್ ಸ್ಟ್ರೀಟ್

### 6 ದಿನಗಳ ಶ್ರೀಲಂಕಾ ಪ್ರವಾಸ

ರಾಮಾಯಣ ಕಾಲದ ಸ್ಥಳ ವೀಕ್ಷಣೆ

ಕೊಲೊಂಬೊ, ನೆಗೆಂಬೊ, ಕ್ಯಾಂಡಿ, ಡಾಂಬುಲಾ, ಸೀತಾ ಅಶೋಕವನ, ಹನುಮಾನ್ ದೇವಸ್ಥಾನ ಹಾಗೂ
ಶ್ರೀಲಂಕಾ ಸಾಂಸ್ಕೃತಿಕ ಕಾರ್ಯಕ್ರಮಗಳು

### 15 ಮತ್ತು 18 ದಿನಗಳ ಗ್ರ್ಯಾಂಡ್ ಯು.ಕೆ.-ಯುರೋಪ್ ಪ್ರವಾಸ

ಯು.ಕೆ. ಫ್ರಾನ್ಸ್, ಬೆಲ್ಜಿಯಂ, ನೆದರ್‌ಲ್ಯಾಂಡ್, ಜರ್ಮನಿ, ಸ್ವಿಟ್ಜರ್‌ಲ್ಯಾಂಡ್, ಆಸ್ಟ್ರೀಯಾ, ಲಿಚೆನ್‌ಟೆನ್‌ಸ್ಟೈನ್, ಇಟಲಿ, ವ್ಯಾಟಿಕನ್

### 8 ದಿನಗಳ ಶ್ರೀ ಮುಕ್ತಿನಾಥ ಯಾತ್ರೆ (ಸಾಲಿಗ್ರಾಮಂ) ಬೆಂಗಳೂರಿನಿಂದ ವಿಮಾನದಲ್ಲಿ

ಪ್ರವಾಸ ಸ್ಥಳಗಳು : ಶ್ರೀ ಮುಕ್ತಿನಾಥ ದೇವಸ್ಥಾನ, ಪಶುಪತಿನಾಥ ದೇವಸ್ಥಾನ, ಜಲನಾರಾಯಣ ದೇವಸ್ಥಾನ, ಶ್ರೀ ಕೃಷ್ಣ ದೇವಸ್ಥಾನ, ಕಠ್ಮಂಡು ಸಿಟಿ ಟೂರ್,
ಪೋಕ್ರಾ-ಬಿಂದಾಬಾಸಿನಿ ದೇವಸ್ಥಾನ, ತಾಲಭೈರವಿ ದೇವಸ್ಥಾನ, ದೋಣಿಯಲ್ಲಿ ಪೋಕ್ರಾ ಲೇಕ್ ಒಂದು ವಿಹಾರ, ಮನೋಕಾಮನ ದೇವಸ್ಥಾನ (ಕೇಬಲ್ ಕಾರ್‌ನಲ್ಲಿ)

### 10 ದಿನಗಳ ಚೈನಾ, ಹಾಂಕಾಂಗ್, ಮಕಾವ್ ಪ್ರವಾಸ

ಆಕ್ರೋಬೆಟಿಕ್ ಶೋ, ಓಷನ್ ಪಾರ್ಕ್, ಬೀಜಿಂಗ್ ನಗರ ವೀಕ್ಷಣೆ, ಶಾಂಘೈ ನಗರ ವೀಕ್ಷಣೆ, ಏಳು ಅದ್ಭುತಗಳಲ್ಲಿ ಒಂದಾದ ಚೀನಾ
ಮಹಾಗೋಡೆ (Great Wall of China) ಸಮ್ಮರ್ ಪ್ಯಾಲೇಸ್, ಹಾಂಕಾಂಗ್ ಮ್ಯೂಸಿಯಂ ಮತ್ತು ಮಕಾವ್ ಹಾಗೂ ಇತರೆ.

**ಕೈಲಾಸ ಮಾನಸ ಸರೋವರ ಯಾತ್ರೆ - ವಿವರಗಳಿಗೆ ಸಂಪರ್ಕಿಸಿ - 9900080793**

ಪ್ರಧಾನ ಕಛೇರಿ : ಬಸವನಗುಡಿ
ಫೋನ್: 080-26670646, 26621983
ಮೊಬೈಲ್ : 9900080794, 9900080796

ಶಾಖಾ ಕಛೇರಿ : ಮಲ್ಲೇಶ್ವರಂ
ಫೋನ್: 080-23445559
ಮೊಬೈಲ್ : 9900080793, 9900080792

**www.orchidtours.net**

VIVEKA PRABHA (KANNADA MONTHLY)
April 2018, Vol.18, No.04, No.of pages : 44

Registered With Registrar of News Papers Of India
under 72356/2000.postal Regn.No.KA/SK/MYS/480/
2018-20. LICENCED TO POST W.P.P.AT YADAVAGIRI
MYSORE 570 020,VIDE LICENCE NO.SK/WPP/MYS/155/2018-20















Printed at mayur graphics,Bangalore